275

# ಪಾರ್ವತೀ ಸತ್ವಪರೀಕ್ಷೆ

—



ವೈ. ವಾ. ಸವಣೂರ ವಾಮನರಾವ ಮಾಸ್ತರರು

# ಪಾರ್ವತೀ ಸತ್ವಪರೀಕ್ಷೆ

ಭಾವಾನುವಾದಕರು :

**ವೈ. ವಾ. ಸವಣೂರ ವಾಮನರಾವ ಮಾಸ್ತರರು**






೧-೧೨-೦

ಮುದ್ರಕರು :

ಶೇ. ಗೋ. ಕುಲಕರ್ಣಿ

ಸಾಧನ ಮುದ್ರಣಾಲಯ

ಧಾರವಾಡ ೩೬—೩೯



೧೯೩೯

ಮೊದಲನೆಯ ಆವೃತ್ತಿ





ಪ್ರಕಾಶಕರು :

ವೆಂಕಟೇಶ ವಾಮನರಾವ ಸವಣೂರ

ಮೆಣಸಿನಕಾಯಿ ಓಣಿ

ಧಾರವಾಡ

# ಪ್ರಸ್ತಾವನೆ

ಸುಮಾರು ಇಪ್ಪತ್ತು ವರುಷಗಳ ಹಿಂದೆ ಈ ನಾಟಕವು ಕನ್ನಡ ರಂಗ ಭೂಮಿಯ ಮೇಲೆ ಬಂದು, ಕೆಲವೊಂದು ಕಾಲ ಈ ನಾಟಕಕ್ಕೆ ಕನ್ನಡ ರಸಿಕರಿಂದ ಹೆಚ್ಚಾದ ಪ್ರೋತ್ಸಾಹ ಸಿಕ್ಕಿತು. ಮನೆಮನೆಯಲ್ಲೂ ಈ ನಾಟಕದ ಪದ್ಯಗಳು ಹಾಡಲ್ಪಟ್ಟವು. ನಮ್ಮ ರಂಗಭೂಮಿಯ ಮೇಲೆ ಅತಿಯಾಗಿ ಪ್ರಚುರವಾದ ಈ ನಾಟಕವನ್ನು ಈಗ ಪುಸ್ತಕ ರೂಪದಿಂದ ಪ್ರಕಟಿಸಲು ಸಂತೋಷವಾಗುತ್ತದೆ.

ಮೂಲದಲ್ಲಿ ಈ ನಾಟಕವು ಮರಾಠಿಯಲ್ಲಿ ರಾ। ಆಗಟೆಯವರು ಬರೆದದ್ದನ್ನು, ನನ್ನ ತಂದೆಯವರಾದ ವೈ. ವಾ. ವಾಮನರಾವ ಮಾಸ್ತರರು ಕನ್ನಡಕ್ಕೆ ಹೊಂದುವಂತೆ ಬರೆದು, ತಮ್ಮ ವಿಶ್ವಗುಣಾದರ್ಶ ನಾಟಕ ಕಂಪನಿಯ ಮೂಲಕ ರಂಗಭೂಮಿಯ ಮೇಲೆ ತಂದರು.

ನನ್ನ ಈ ಪ್ರಕಾಶನ ಕಾರ್ಯಕ್ಕೆ ಕನ್ನಡ ರಸಿಕರಿಂದ ಬೆಂಬಲ ಸಿಕ್ಕೀತೆಂದು ನನಗೆ ಭರವಸೆಯಿದೆ.

ನನ್ನ ಈ ಪ್ರಕಾಶನ ಕಾರ್ಯದಲ್ಲಿ ನನಗೆ ತುಂಬಾ ನೆರವಾದ ವಾಗ್ವಿಲಾಸ ಪುಸ್ತಕಾಲಯದ ಯಜಮಾನರಾದ ಎ. ಆರ್. ಶಿವನಾಗಪ್ಪನವರಿಗೂ, ಶ್ರೀ ಜುಳ್ಳಿಯವರಿಗೂ ತುಂಬಾ ಋಣಿಯಾಗಿದ್ದೇನೆ.

**ವೆ. ವಾ. ಸವಣೂರ**



ಮೈ. ಶಾ. ವಾಮನರಾವ ಶಾಸ್ತ್ರರರು

# ಪಾರ್ವತೀ ಸತ್ವಪರೀಕ್ಷಾ.

## ಪ್ರಥಮಾಂಕ.

### ಪ್ರಥಮ ರಂಗ "ಈಶ್ವರ ದೇವಾಲಯ"

---

( ಪೂಜಾರಿಯು ಪೂಜೆಯನ್ನು ಮಾಡುತ್ತಿರುವನು. ನಂದಿಗ್ರಾಮದ ವೇಶ್ಯಾಸ್ತ್ರೀಯರು ಸ್ತುತಿಯನ್ನು ಮಾಡುವರು. )

**ಈಶಸ್ತವನ.**

ರಾಗ- ದರ್ಬಾರಿಕಾನಡ । ತಾಳ- ತ್ರಿವಟ.

**ಜಯ ಮಹೇಶಾ । ಸುಯಶಾ ॥ ರಜತಾಚಲ ವಾಸಾ ॥**
**ಯೋಗಿವಶಾ ದಶದಿಶಾ । ಸುಲಲಿತ ಪ್ರಕಾಶಾ॥ ಪಲ್ಲ ॥**
**ಗಣಾಧಿಪರು ಗೈವರು । ಸನ್ಮುಖದೆ ಸುನಾಟ್ಯವಾ ॥**
**ಥೂಂ ಥೂಂ ಥನನ ಥನನನನ ॥೧॥**
**ಮೃದಂಗ ಡಮರೂ । ಮಧುರ ಸ್ವರವಾ । ವಿನೋದದೆ ॥**
**ತೋಂ ತೋಂ ತೋಂ । ತನನ । ತನನನನ ॥ ೨ ॥**

**ರಂಭಾ:**— ಸಾಕು ಬಿಡೇ? ಆ ಭಕ್ತಶ್ರೇಷ್ಠಳು ಬರುವವರೆಗೂ ಏನಾದರೂ ವಿಷಯವನ್ನು ಕುರಿತು ಮಾತಾಡುತ್ತಾ ಕೂಡುವಾ.

**ಮೇನಕೆ:**— ಏನೇ? ಇವಳು ಮಹಾಭಕ್ತೆ ಶಿಖಾಮಣಿಯೆಂದು ಮೆರೆಯುತ್ತಿರುವಳು. ಆದರೆ ಇವಳಿಗೆ ಈ ನಮ್ಮ ಶೃಂಗಾರಿಕ ವೈಭವಗ ಳೇತಕ್ಕೆ ಬೇಕು? ಕೇವಲ ಶಂಕರನಂತೆ ಸನ್ಯಾಸವನ್ನು ಸ್ವೀಕರಿಸಿ ಸ್ಮಶಾನ ದಲ್ಲಿ ಹೋಗಿ ಸುಖವಾಗಿ ಶಂಕರ ಶಂಕರನೆಂದು ಸುಮ್ಮನೆ ಭಜನೆ ಮಾ ಡುತ್ತಾ ಕೂಡ್ರಬೇಕು.

**ಊರ್ವಸಿ:**—ನನ್ನ ಮನಸ್ಸಿನಲ್ಲಿ ಈ ವಿಷಯವಾಗಿ ಅವಳಿಗೆ ಒಂದು ಸಾರೆಯಾದರೂ ಮಾತನಾಡಬೇಕೆಂದಿರುವದು.

**ತಿಲೋತ್ತಮೆ:—** ನಾವೇಕೆ ಮಾತಾಡಿಸಬೇಕು ? ಮಾತಾಡಿಸತಕ್ಕವನು ಎಚ್ಚರವಾಗಿ ಆಡಿಸುವದಕ್ಕೆ ಪ್ರಾರಂಭಿಸಿದರೆ ಸಹಜವಾಗಿ ತಾನೇ ಆಗುವದು.

**ವಸಂತಿಕಾ:—** ಹೀಗೆ ಮಾತಾಡಿಸತಕ್ಕವನಾದರೂ ಯಾರಮ್ಮಾ?

**ಮಧುಮಲ್ಲಿಕಾ:—** ನಮ್ಮನ್ನು ಮೋಹಿಸತಕ್ಕವನು ಅವನೇ ?

**ಲೀಲಾವತಿ:—** ಸರಿ ! ಸರಿ ! ಈಗ ತಿಳಿಯಿತು. ಇವಳು ಶಂಕರನ ಭಕ್ತಿಯಲ್ಲಿ ಮಗ್ನಳಾಗಲಿಕ್ಕೆ ಇದೇ ಕಾರಣವೇ.

**ಲೀಲಾವತಿ:—** ಆದರೆ ಶಂಕರನಂತೂ ಅವನನ್ನು ದಹಿಸಿದನಂತೆ.

**ವಾಸಂತಿಕಾ:—** ಶಂಕರನು ಮನ್ಮಥನನ್ನು ದಹಿಸಿದರೂ ನಮ್ಮ ಬೆನ್ನುಹತ್ತಿದ ಅವನ ಸುಳಿದಾಟವು ಇನ್ನೂ ಕಡಿಮೆಯಾಗಿರುವದಿಲ್ಲವಲ್ಲ !

**ಲೀಲಾವತಿ:—** ಏನೇ ಇವಳು ತರುಣಿಯು. ರೂಪವಂತಿಯು. ವೈಭವಶಾಲಿಯು. ಹೀಗೆ ಇರುವದರಿಂದ ಆ ಮದನನು ಇವಳಿಗೆ ನಿರ್ಮಾಲ್ಯನು. ಸರ್ವ ಜಗತ್ತನ್ನೇ ಉಪಭೋಗಿಸಿದಂಥಾ ಮನ್ಮಥನು ಇವಳಿಗೆ ಬೇಡಾಗಿರಬಹುದು. ನೂತನವಾಗಿ ಇವಳಸ್ವರರೂಪಕ್ಕೆ ಸರಿಯಾದ ಮತ್ತೊಬ್ಬ ನೂತನ ಮನ್ಮಥನೇ ಬೇಕಾಗಿರಬಹುದು.

**ಮೋನಕೆ:—** ಸುಮ್ಮನಿರು. ಸದಾನಂದೆಯೂ ಮಹಾನಂದೆಯೂ ದೇವರ ಪೂಜೆಯನ್ನು ತೀರಿಸಿ ಇತ್ತಲೇ ಬರುತ್ತಿರುವರು.

( ಮಹಾನಂದಾ ಸದಾನಂದಾ ಪ್ರವೇಶ. )

**ರಂಭಾ:—** ಮಹಾನಂದೇ ನಿನಗೆ ಬಹುದಿವಸಗಳಿಂದ ಹೇಳಬೇಕೆಂದು ಮಾಡಿದ್ದೆನು. ನೀನು ಇನ್ನು ಮುಂದೆ ಈ ಶಂಕರನ ಪೂಜೆಯನ್ನು ಮಾಡುವ ದುರಭ್ಯಾಸವನ್ನು ಬಿಟ್ಟು ಬಿಡು.

**ಮಹಾನಂದಾ:—** ಅದೇಕೆ ?

**ರಂಭಾ:—** ಈ ಸ್ಮಶಾನ ವಾಸಿಯಾದ ಶಂಕರನು ನಮ್ಮಂಥಾ ರಾಜ

ವಿಲಾಸೀ ಭಕ್ತಜನಗಳಿಗೆ ತೀರಾ ಅಯೋಗ್ಯನಿರುವನು. ಪರಮೇಶ್ವರನ ಕೃಪೆಯಿಂದ ನಿನಗೆ ಅಪಾರವಾದ ಸಂಪತ್ತು ಇರುವದು. ಆದ್ದರಿಂದ ನೀನು ಮಹಾನ್ ಮಹಾನ್ ವಿದ್ವಾನ್ ಬ್ರಾಹ್ಮಣರಿಂದ ಸತ್ಕರ್ಮಗಳನ್ನು ಮಾಡಿಸು. ಅಂದರೆ ನಿನ್ನ ಜನ್ಮವು ಸಾರ್ಥಕವಾಗಿ ನಿನಗೆ ಚಿರಕಾಲವಾದ ಸ್ವರ್ಗವು ಪ್ರಾಪ್ತಿಯಾದೀತು.

**ಮಹಾನಂದಾಃ**— ಜಗನ್ನಿಯಂತನಾದ ಮಹದೇವನ ವೈಭವವನ್ನು ನೀವು ಯತಾರ್ಥವಾಗಿ ತಿಳಿಯದೇ ಇರುವದರಿಂದ ನೀವು ನನಗೆ ಹೀಗೆ ವಿಪರೀತವಾಗಿ ಬುದ್ಧಿ ಕಲಿಸುವಿರಿ. ಶಂಕರನ ಸಂಪೂರ್ಣ ಜ್ಞಾನವು ಬ್ರಹ್ಮವಿಷ್ಣು ಇವರಿಗೆ ಸಹಾ ಗೊತ್ತಾಗಿರುವದಿಲ್ಲ. ಸರ್ವ ದೇವತೆಗಳ ಐಶ್ವರ್ಯವು ನಶ್ವರವಾದದ್ದು. ಆದರೆ ಮಹದೇವನ ವೈಭವವು ಅವಿನಾಶವು. ಆದ್ದರಿಂದ ನಾನು ಅವನಿಗೇ ಶರಣು ಹೋಗಿರುವೆನು.

**ರಂಭಾಃ**— ಮಹಾನಂದೇ ನೀನು ಏನು ಹೇಳಿದರೂ, ಶಂಕರ, ದತ್ತಾತ್ರೇಯ, ಮಾರುತಿ, ಈ ಮೂವರು ಸಂಸಾರಿಕ ಜನಗಳಿಗೆ ಏನೂ ಉಪಯೋಗವಿಲ್ಲದವರು. ಇವರು ತಮ್ಮ ಭಕ್ತರನ್ನು ಕೊನೆಗೆ ತಮ್ಮಂತೆಯೇ ಮಾಡಿಬಿಡುವರು.

**ಮಹಾನಂದಾಃ**— ಭಕ್ತಿಯಂತೆ ಫಲವು ಇದೇ ದೇವರ ಬಿರಿದು. ನಿಮಗೆ ನನ್ನ ಕೃತ್ಯವು ಸರಿಬಾರದಿದ್ದರೆ ನೀವು ನಾಳಿನಿಂದ ನನ್ನ ಜತೆಗೆ ಬರುವ ಶ್ರಮವನ್ನೇ ಮಾಡಬೇಡಿರಿ.

**ಸದಾನಂದಾಃ**— ನಾವು ನಿನ್ನೊಬ್ಬಳನ್ನೇ ಹೋಗಗೊಡುವರಲ್ಲ. ನಾವು ನಿನ್ನ ಜತೆಗೆ ಬರತಕ್ಕವರೇ.

**ಮಹಾನಂದಾಃ**— ನನ್ನ ಜತೆಯಲ್ಲಿ ಬರತಕ್ಕವರಾದರೆ ನನ್ನ ಆರಾಧ್ಯದೇವತೆಗೆ ಯಾರೂ ಹೆಸರಿಡಲಿಕ್ಕಾಗದು. ಮತ್ತು, ನೀವೆಲ್ಲರೂ ನನ್ನಂತೆಯೇ ಪೂಜಿಸಲಿಕ್ಕೇ ಬೇಕು.

**ಸದಾನಂದಾಃ**— ಬೇಕಾದರೆ ನಿನ್ನ ಗೊಸ್ಕರ ಪೂಜಿಸೋಣ.

**ಮಹಾನಂದಃ**— ಇರಲಿ! ಈಗ ಉತ್ತಮವಾದ ಒಂದು ದೇವತಾ ಸ್ತುತಿಯನ್ನು ಹೇಳಿ ಮನೆಗೆ ಹೋಗೋಣ.

೩. ರಾಗ ಭೂಪ. ತಾಳ ದಾದರಾ.

**ನಮೋ ನಂದೀಶಾ ದಾಕ್ಷಾಯಣೀಶಾ। ಭವಾಬ್ಧಿ ಭಯ**
**ವಿನಾಶಾ। ಅನಂತಗುಣ ನಿವಾಸಾ ॥ಪಲ್ಲ॥**
**ನಿನ್ನ ಚರಣಕೆ। ಮನವನಾನರ್ಪಿಸಿದೆ। ಸನ್ನುತಾಂಗನೇ**
**ಮುದದೆ ॥೧॥**

## ಪ್ರವೇಶ ೨.

---

### ರಸ್ತೆ.

( ಬ್ರಹ್ಮಾನಂದನು ಪ್ರವೇಶಿಸಿ, )

**ಬ್ರಹ್ಮಾನಂದಃ**— ವಾರಾಂಗನೆಯ ಬಾಂಧವನೆಂದರೆ ಈ ಜಗತ್ತಿನಲ್ಲಿ ಸಾಮಾನ್ಯ ವ್ಯಕ್ತಿಯಲ್ಲ- ಸುಮ್ಮನೆ ಯಾವನಾದರೊಬ್ಬನು ತಾನು ವಾರಾಂಗನೆಯ ಬಾಂಧವನಾಗಬೇಕೆಂದು ಅಪೇಕ್ಷಿಸಿದರೆ ಅದು ಎಂದಿಗೂ ಸಾಧಿಸಲಾರದು. ಏಕಂದರೆ ಈ ಸ್ಥಳವು ದೊರೆಯ ಬೇಕಾದರೆ ಚಿಕ್ಕಂದಿನಿಂದಲೂ ಗಂಧರ್ವರಂತೆ ಗಾಯನ ವಿದ್ಯೆಯು ಬರಬೇಕಾಗುವದು. ಕಿನ್ನರರಂತೆ ತಂತುವಾದ್ಯದಲ್ಲಿ ನೈಪುಣ್ಯವನ್ನು ದೊರಕಿಸಬೇಕಾಗುವದು. ಮತ್ತು ಅಪ್ಸರೆಯರಂತೆ ಅಭಿನೈಸಲಿಕ್ಕೆ ಬೇಕಾಗುವದು. ಈ ಮೂರು ಗುಣಗಳನ್ನು ಸಂಪಾದನ ಮಾಡುವದಲ್ಲದೇ ಹಿರಿಯರು ಸಂಪಾದಿಸಿದ ಸಂಪತ್ತಿಯನ್ನು ಯಥೇಚ್ಛವಾಗಿ ಉಪಭೋಗಿಸುವಂಥಾ ಒಬ್ಬ ಪೋಲಿ ಮನುಷ್ಯನ ಕೂಡಾ ಅಲೌಕಿಕ ಸ್ನೇಹಸಂಪಾದಿಸಿ, ಅವನ ಹಿರಿಯರು ಯಾರಿಗೂ ತಿಳಿಯದಂತೆ ತಗ್ಗಿನಲ್ಲಿ ಹೂಳಿಟ್ಟ ಗಂಗಾಜಲಿಯನ್ನು ಒಳ್ಳೇ ಸಾತ್ವೀಕ ರೀತಿಯಿಂದ ತಮ್ಮ ಅಕ್ಕನ ಪದರಿನಲ್ಲಿ ಹಾಕಿಸಿ, ಆ ಗಂಗಾಜಲಿಗೆ ಬದಲಾಗಿ ಅವನನ್ನು ಆ ತಗ್ಗಿನಲ್ಲಿ ಸ್ಥಾಪಿಸ

ಬೇಕಾಗುವದು. ಇಂಥ ಸಮಸ್ತ ವಿದ್ಯೆಗಳು ನನ್ನ ಒಬ್ಬನಲ್ಲಿಯೇ ವಾಸ ಮಾಡಿಕೊಂಡಿರುವವು. ಆದ್ದರಿಂದ ಇಲ್ಲಿಯ ಸರ್ವನಾಯುಕಸಾನಿಯುವರು ನನ್ನನ್ನು ಒಳ್ಳೇ ವೈತ್ರತ್ವದಿಂದ ಚನ್ನಾಗಿ ಗೌರವಿಸಿ, ನನಗೆ ಈ ಸುವರ್ಣ ಪದಕವನ್ನು ಬಹುಸನ್ಮಾನದಿಂದ ಉಚಿತವಾಗಿ ಕೊಟ್ಟಿರುವರು. ಮತ್ತು ಇಂತಹ ಸನ್ಮಾನಕ್ಕೆ ನಾನು ಯೋಗ್ಯನೇ ಇರುವೆನು. ಏಕಂದರೆ?

೩. ರಾಗ ಪಾರ್ಶಿ ಚಾಲ, ತಾಳ ಕೇರವಾ.

**ನರನಾರಿಯು ತನು ಮನ ಧನಗಳ ಸೆಳೆಯುವೆ ನೇತ್ರ**
**ಕಟಾಕ್ಷದಲಿ। ಸರಿಗಮ ಪಾಡುತೆ ತರುಣ ತರುಣಿ ಮನ**
**ಚಂಚಲ ಮಾಡುತೆ ಅಭಿನಯ ತೋರುತೆ ॥೧॥**
**ನರೇಂದ್ರ ಪಾರ್ಥನಂದದೆ ದ್ವಂದ ಕರಗಳಿಂದ। ಶರಸಂ**
**ಧಾನವ ಮಾಳ್ಪೆ ಸೊಬಗಿನಿಂದ ॥೧॥**

ಇರಲಿ. ಸುಮ್ಮನೆ ಹೆಚ್ಚಾಗಿ ಆತ್ಮ ಸ್ತುತ್ಯವನ್ನು ಮಾಡುತ್ತಾ ಕೂಡುವ ದಕ್ಕೆ ಇದು ಸಮಯುವಲ್ಲ. ಏಕಂದರೆ ಅದನ್ನು ಕೇಳುವದಕ್ಕೆ ಈ ಸ್ಥಳ ದಲ್ಲಿ ನನ್ನ ಹೊರತು ಮತ್ತ್ಯಾರು ಇಲ್ಲ. ಈ ದಿವಸ ನಮ್ಮ ಮನೆಯಲ್ಲಿ ಸದಾನಂದೆಯ ಗಾಂಧರ್ವ ವಿವಾಹವು ನಡೆಯತಕ್ಕದ್ದಿರುವದು. ಆದ್ದರಿಂದ ಪೂರ್ವಸಿದ್ಧತೆಯನ್ನು ಮಾಡುವದಕ್ಕೋಸ್ಕರ, ಸರ್ವರನ್ನೂ, ಬೇಗನೇ ಕರೆ ದುಕೊಂಡು ಬರುವದಕ್ಕಾಗಿ, ನಮ್ಮ ಮಾತೋಶ್ರೀಯು ನನಗೆ ಹೇಳಿರು ವಳು. ಆದ್ದರಿಂದ ಅತ್ತಲೇ ಹೋಗುವೆನು.

( ಎಲ್ಲ ವಾರಾಂಗನೆಯರೊಡನೆ ಸದಾನಂದೆಯ ಪ್ರವೇಶ. )

**ಬ್ರಹ್ಮಾನಂದಃ**— ವಹವ್ವಾ! ವಾಹವ್ವಾ! ತೀರಾ ಶಿಖರಕ್ಕೆ ಮು ಟ್ಟಿದಂತಾಯಿತು. ಈ ದಿನ, ನಮ್ಮ, ಮನೆಯಲ್ಲಿ ದೊಡ್ಡ ಕಾರ್ಯವೇನು ನಡೆದಿರುವದು? ನೀವು ನಿತ್ಯದಂತೆ ಗಾಣದ ಎತ್ತಿನ ಹಾಗೆ, ಒಂದೇ ಸವನೆ ಸುತ್ತುತ್ತಿರುವಿರಿ. ಸದಾನಂದೇ! ಲಗ್ನವಾಗುವ ದಿವಸ ಹೀಗೆ ಬೀದಿಯಲ್ಲಿ ತಿರುಗಾಡಬಾರದಮ್ಮಾ. ಏಕಂದರೆ ಯಾರದಾದರೂ ದೃಷ್ಟಿ ತಗಲೀತು.

**ರಂಭಾ:**— ಅಂದರೆ! ಈ ದಿವಸ ಸದಾನಂದೆಯ ಗಾಂಧರ್ವ ವಿವಾಹವೇನು ? ಆದರೆ ಅಂಥಾ ಗಂಧರ್ವನಾದರೂ ಯಾರು ?

**ಬ್ರಹ್ಮಾನಂದ:**— ಗಂಧರ್ವರಿಗೇನು ಕಡಿಮೆ. ಕಮಲಿನಿಯು ಪ್ರಫುಲ್ಲಿತೆಯಾದ ಮೇಲೆ ಭ್ರಮರಗಳನ್ನು ಯಾರಾದರೂ ಬಾ ಎಂದು ಕರೆಯಬೇಕೆ ? ಒಳ್ಳೆ ಚನ್ನಾಗಿ ನಟಿಸಿಕೊಂಡು ಸಾವಿರಾರು ರೂಪಾಯಿಗಳಿಂದ ತುಂಬಿದ ಹೆಮ್ಮಣಿಗಳನ್ನು ನಮ್ಮಅಮ್ಮನವರ ಮುಂದೆ ಸುರುವಿ, ಎಷ್ಟೋ ಗಂಧರ್ವರು, ನಾ ಮೊದಲು ! ನೀ ಮೊದಲು ! ಎಂದು ಗತಿಬಾಯಿಬಡುತ್ತಿರುವರು. ಇರಲಿ ನಡೆಯಿರಿನ್ನು.

( ಬ್ರಹ್ಮಾನಂದನು ಹೋಗುವನು. )

**ಮಹಾನಂದಾ:**— ಅಕ್ಕಾ ! ದಿನಕ್ಕಿಂತಲೂ ನಿನ್ನ ಮುಖವು ಈ ದಿವಸ ಹೆಚ್ಚು ಪ್ರಫುಲ್ಲಿತ ವಾಗಿರುವ ಕಾರಣವೇನು ?

**ಸದಾನಂದಾ:**— ನಿನ್ನದಾದರೂ ಒಂದಾನೊಂದು ದಿವಸ ಹೀಗೇ ಕಾಣುವದು.

**ಮಹಾನಂದಾ:**— ಕಂಡೀತು ? ಆದರೆ ಕುಲಾಂಗನೆಯರಿಗೆ ಶೋಭಿಸ ವಂತೆ ಕಂಡೀತು.

**ಸದಾನಂದೆ:**— ಅಂದರೆ ನೀನು ವಾರಾಂಗನೆ ಯಾಗುವದಿಲ್ಲವೇನು ?

**ಮಹಾನಂದಾ:**— ಆಗುವೆನು. ಆದರೆ ಕುಲಾಂಗನೆಯರಂತೆ ವರ್ತಿಸುವೆನು.

**ಸದಾನಂದೆ:** – ಅಂದರೆ! ಪಂಚಪಕ್ವಾನ್ನವನ್ನು ಬಿಟ್ಟು, ಕದಾನ್ನವನ್ನು ಭುಂಜಿಸುವೆಯಾ ?

**ಮಹಾನಂದಾ:** — ಅಕ್ಕಾ ಈ ನಮ್ಮ ಸ್ತ್ರೀಯರ ಶರೀರವು, ಮಾನವ ಸೃಷ್ಟಿಯ ಉತ್ಪತ್ತಿಗೆ ಒಂದು ಪವಿತ್ರವಾದ ಭೂಮಿಯಾಗಿರುವದು. ಅದನ್ನು ನಾವು, ನಿಯಮಿತವಾಗಿಯೂ, ಪವಿತ್ರವಾಗಿಯೂ, ಕಾಯ್ದುಕೊಂಡರೆ ಅದ

ರಿಂದ ಹುಟ್ಟುವ ಅಂಕುರವು, ಸಧೃಢವೂ ತೇಜಸ್ವಿಯೂ ಆಗುವದು. ಆದ್ದರಿಂದ ವಾರಾಂಗನೆಯರ ಯೋಗ್ಯತೆಯು ಕುಲಾಂಗನೆಯರಕ್ಕಿಂತಲೂ ಹೀನತರವಾದದ್ದು,

**ಸದಾನಂದೆ:** -- ಯೋಗ್ಯತೆಯಲ್ಲೇನಿರುವದು ? ಇದಕ್ಕೆಲ್ಲಾ ಅವರವರ ಮನಸ್ಸೇ ಮುಖ್ಯ ಕಾರಣವಾಗಿರುವದು !

**ಮಹಾನಂದಾ:**— ಛೀ ಛೀ ಅದು ಹೇಗೆ ? ಶರೀರದ ಇಂದ್ರಿಯಗಳನ್ನು ಎಷ್ಟು ನಿಯಮಿತ ಪ್ರಮಾಣದಿಂದ ಉಪಯೋಗಿಸುವದೋ, ಅಷ್ಟು, ಅದರ ತೇಜವು ಬೆಳೆಯುವದು. ಮತ್ತು ಪ್ರಾಚೀನಕಾಲದ ಮಹಾ ಮಹಾ ಪತಿವ್ರತೆಯರ ಹೆಸರು, ಇಂದಿಗೂ ಅಜರಾಮರವಾಗಿರುವದು. ಇದೇ ಗುಣದಿಂದಲೇ ಮಹಾ ಸಾಧ್ವಿಯಾದ ಗಾಂಧಾರಿಯು ತನ್ನ ನೇತ್ರಗಳನ್ನು ಮುಚ್ಚಿಕೊಂಡಿದ್ದಳು. ಆದ್ದರಿಂದ, ಅದರಲ್ಲಿ ಇಂಥಾದ್ದೊಂದು ವಿಲಕ್ಷಣವಾದ ಶಕ್ತಿಯು ಉತ್ಪನ್ನವಾಗಿತ್ತು ! ಯಾವನ ಕಡೆಗೆ ಅವಳು ನೋಡುವಳೋ ಅವನು ಕೇವಲ ವಜ್ರ ದೇಹಿಯೇ ಆಗುತ್ತಿದ್ದನು. ಪ್ರಾಚೀನಕಾಲದಲ್ಲಿಯೂ, ಸಾಂಪ್ರತಕಾಲದಲ್ಲಿಯೂ, ಎಂಥೆಂಥ ಅಲೌಲಿಕ ಪುರುಷರು ಜನಿಸಿದರೋ ? ಅವರ ಅಲೌಕಿಕತೆಗೆ ಅವರ ಮಾತಾಪಿತೃಗಳ ವಿಷಯೋಪಭೋಗದ ನಿಯಮಿತ ಗುಣವೇ ಕಾರಣವಾಗಿರುವದು. ಆದ್ದರಿಂದ, ನಾನು ಏಕದೃಷ್ಟಿಯಿಂದ ವಾರಾಂಗನೆಯರಕಿಂತಲೂ ಅನೇಕ ದೃಷ್ಟಿಯಿಂದ, ಕುಲಾಂಗನೆಯರ ಯೋಗ್ಯತೆಯೇ ಹೆಚ್ಚಾಗಿರುವದೆಂದು ತಿಳಿಯುವೆನು.

**ಸದಾನಂದೆ:**— ಏನೇ ? ನೀನು ನಮ್ಮ ಯೋಗ್ಯತೆಯನ್ನು ಕಡಿಮೆಯೆಂದು ಭಾವಿಸುವೆಯಾ ? ನಾವು ಯೋಗ್ಯತೆಯಲ್ಲಿ ಹರಿಶ್ಚಂದ್ರನಿಗೆ ಸಮಾನರಾದವರು.

**ಮಹಾನಂದಾ:**— ಅದು ಹೇಗೆ ?

**ಸದಾನಂದೆಃ**— ಹರಿಶ್ಚಂದ್ರನು ತನ್ನ ದೇಹವನ್ನು ಒಂದೇ ಸಲ ವಿಕ್ರಯಮಾಡಿಕೊಂಡನು. ಆದರೆ ನಾವು ನಮ್ಮ ದೇಹವನ್ನು ದಿನಾಲು ವಿಕ್ರಯಮಾಡುತ್ತೇವೆ.

**ಮಹಾನಂದಾಃ**— ಸರಿ. ಸರಿ. ನೀನು ಏನಾದರೂ ಬಾದರಾಯಣ ಸಮ್ಮಂಧವನ್ನು ಹೇಳುತ್ತಿ.

**ಸದಾನಂದೆಃ**— ಹೌದು. ಈಗಿನ ಕಾಲದಲ್ಲಿ ಕೆಲವರು ಬರೇ ಉಪನಾಮದಿಂದಲೇ ತಾವು ಕ್ಷತ್ರಿಯರೆಂದು ಹೇಳಿಕೊಳ್ಳುವದಿಲ್ಲವೇ ? ಅದರಂತೆ ನಾವು. ಇರಲಿ ನಡೆ ಹೊತ್ತಾಯಿತು. ಮನೆಗೆ ಹೋಗೋಣ.

**ಮಹಾನಂದಾಃ**— ಒಳ್ಳೇದು ಬಂದೆ ನಡೆ ( ಸದಾನಂದೆ ಹೋಗುವಳು. ) ಈ ನಮ್ಮ ಸದಾನಂದೆಯು ನಮ್ಮನ್ನು ಆ ಹರಿಶ್ಚಂದ್ರನ ಯೋಗ್ಯತೆಗೆ ಹೋಲಿಸುವಳು. ಆ ಸತ್ವಶೀಲರಾಜನ ಹೆಸರನ್ನು ಉಚ್ಚರಿಸುವಪಕ್ಕಾದರೂ, ಈ ನಮ್ಮ ಅಪವಿತ್ರ ಮುಖದ ಯೋಗ್ಯತೆಯೇ ಅಲ್ಲ. ಅವನು ಸ್ವಪ್ನದಲ್ಲಿ ದಾನ ಕೊಟ್ಟದ್ದನ್ನು ಜಾಗ್ರತನಾದ ಮೇಲೆ ವಪ್ಪಿದನು. ಆದರೆ ನಾವು ಜಾಗ್ರತಾವಸ್ಥೆಯಲ್ಲಿ ತಕ್ಕೊಂಡ ಹಣವನ್ನೂ ಸ್ವಪ್ನದಲ್ಲಿ ಕೂಡಾ ಒಪ್ಪಿಕೊಳ್ಳುವದಿಲ್ಲ. ಯಾವನು ಕಪಟತನದಿಂದ ಸರ್ವಸ್ವವನ್ನು ಅಪಹರಿಸಿದಿನೋ ? ಅವನೇ ಕೋಪದಿಂದ ಲತ್ತಾಪ್ರಹಾರ ಮಾಡಿದರೂ ಅದೆಲ್ಲವನ್ನು ಆ ಹರಿಶ್ಚಂದ್ರನು ಗಾಂಭೀರ್ಯದಿಂದ ಸಹನ ಮಾಡಿದನು. ಆದರೆ ಯಾವನಾದರೊಬ್ಬನು ಸಾತ್ವಿಕ ರೀತಿಯಿಂದ ಎಲ್ಲವನ್ನು ನಮಗೆ ಅರ್ಪಣ ಮಾಡಿ, ಅವನೇ ದೀನಮುದ್ರೆಯಿಂದ ಏನಾದರೂ ಬೇಡಬಂದರೆ, ಅವನಿಗೆ ಪ್ರತಿಯಾಗಿ ನಾವೇ ಲತ್ತಾ ಪ್ರಹಾರ ಮಾಡಿ ಕಳಿಸುತ್ತೇವೆ. ಮಹಾ ಸಾಧ್ವಿಯಾದ ತಾರಾಮತಿಯು, ವಿಪನ್ನಾವಸ್ಥೆಯಲ್ಲಿ ಕೂಡಾ, ಯಾರ ಉಛಿಷ್ಟವನ್ನೂ ಸೇವಿಸಲಿಲ್ಲ. ಆದರೆ ನಾವು ಸಂಪನ್ನಾವಸ್ಥೆಯಲ್ಲಿ ಕೂಡಾ, ಬೇಕಾದವರ ಮುಖದಲ್ಲಿ ಮುಖವನ್ನಿಡುತ್ತೇವೆ. ಪರಮೇಶ್ವರಾ! ಪರಂಪರಾಗತ

ವಾಗಿ ನಡೆಯುತ್ತ ಬಂದಿರುವ ಈ ರೂಢಿಯ ಅತಿರೇಕದಿಂದ ಕೀಳಸ್ಥಿತಿಗೆ ಬಂದ ಈ ವಾರಾಂಗನೆಯ ಜನ್ಮಕ್ಕೆ ಧಿಕ್ಕಾರ! ಧಿಕ್ಕಾರ!! ಧಿಕ್ಕಾರವಿರಲಿ.

ರಾಗ ಕರ್ನಾಟಕ ತೋಡಿ, ತಾಳ ತ್ರಿವಟ.

ಶಿವ ಶಿವ ಜನ್ಮವಿದು ವ್ಯರ್ಥವೇ । ಈ ವಾರನಾರಿಯರ
ದೇಹವು ನೀಚ ‖ ಪಲ್ಲ ‖ ಮಹಿಯೊಳು ಕಾಣೆ ನೋರ್ವ
ಪತಿಯ ಸುಖವ । ಗೃಹಕೆಬರ್ಪ ಮನುಜನೆ ಧಣಿಯಾಗು
ವನೇ । ಬಹಿರಂಗ ಸದ್ಭಾವ ವಾಂತರ್ಯ ಕುಭಾವ ‖ ೧ ‖

## ಪ್ರವೇಶ ೩.

---

### ಇಂದ್ರ ಸಭೆ.

( ಇಂದ್ರ, ನಾರದ, ವಿಶ್ವಾಮಿತ್ರ, ವಸಿಷ್ಠ, ವರುಣ ಮೊದಲಾದವರು ಕುಳಿತಿರುವರು)

**ನಾರದಃ**— ದೇವೇಂದ್ರಾ, ಮೃತ್ಯುಲೋಕದಲ್ಲಿದ್ದ ಮಹಾನಂದೆಯ ಯೋಗ್ಯತೆಯು ನಿಜವಾಗಿಯೂ ದೊಡ್ಡದಾಗಿರುವದು. ಏಕೆಂದರೆ ?

ಖ. ಮಾಂಡ, ತಾಳ ಧುಮಾಳಿ.

ನಾನೆಂತು ಬಣ್ಣಿಪೆ ನಾರಿಯ ಸುಂದರ ಲಾವಣ್ಯ ‖ ಪಲ್ಲ ‖
ತರುಣಿಯ ರೂಪನೋಡಲು ಮದನಾ । ವಿರಹಾನಲ ಬಲಿ
ಬೀಳ್ವನೈಯ್ಯಾ ‖ ಅನುಪಲ್ಲ ‖
ಭೂಮಿಯೊಳಿಂಥ । ಕಾಮಿನಿ ಮಣಿಯ ಕಾಣಿಸು ಸುರವ
ರನೇ । ಪ್ರೇಮದಿ ಪೇಳುವೆ ಸತ್ಯ । ಸುಮನಸದಿ । ತವಕದಿ
ನೀ ಬಿಡು ಶಂಕೆಯನೀಗ ‖೧‖

**ಇಂದ್ರ:**— ಮೃತ್ಯುಲೋಕದ ಪ್ರಜೆಗಳು ನಮ್ಮ ದೇವಲೋಕದ ಪ್ರಜೆಗಳಿಗಿಂತಲೂ ಮಹಾರಾಜನಿಷ್ಠರೂ, ವಿದ್ವಾಂಸರೂ, ಶೂರರೂ, ಅತಿಶಯ ರೂಪಸಂಪನ್ನರೂ ಇರುವದು ತೀರಾ ಅಶಕ್ಯವು. ಅವರ ಮೇಲೆ

ನನ್ನ ವಿಶ್ವಾಸವಿಲ್ಲ. ತಾವು ಇಷ್ಟೊಂದು, ಮಹಾನಂದೆಯ ವಿಷಯವಾಗಿ ವರ್ಣಿಸುವದನ್ನು ನೋಡಿ ನನಗೆ ನನ್ನ ದೇವಾಂಗನೆಯರ ವಿಷಯಕ್ಕೆ ಅಭಿಮಾನವು ಹೆಚ್ಚಾಗಿ, ನಾನು ನಿಶ್ಚಯಾತ್ಮಕವಾಗಿ ಹೇಳುವದೇನಂದರೆ.

೬. ರಾಗ ವಸಂತ, ತಾಳ ಏಕ್ತಾ.

**ಅಸುರಪುರದೊಳಿಂಥನೇಕ । ಕಾಮಿನಿಯರು ರತಿಸಮಾನ ।**
**ನಂದನದೊಳು ಶೋಭಿಸುವರು । ಬ್ರಹ್ಮನಂದನಾ ॥ ಪಲ್ಲ ॥**
**ರಂಭಾನಗಜಾತೆಯಂತೆ ಊರ್ವಶಿಗೆ ಸಮಾನ ಕಾಣೆ ॥**
**ಅಂಬುಜಭವ ನೀಕ್ಷಿಸೆ ತಾ ಭ್ರಾಂತಿ ಪೊಂದುವಾ ॥೧॥**

**ನಾರದಃ**—ಏನು ? ಏನು ಹೇಳುವೆ ? ನಿನ್ನ ಸ್ವರ್ಗಲೋಕದ ವಾರಾಂಗನೆಯರನ್ನು ನೋಡಿ, ಬ್ರಹ್ಮದೇವರು ಅಂದರೆ ನಮ್ಮ ತೀರ್ಥರೂಪರು ಕೂಡಾ ಲಟಪಟಿಸಿ ಹೋಗುವರೆಂದು ಹೇಳುವಿಯಾ ? ದೇವೇಂದ್ರಾ ! ಇಂಥಾ ಉಪರೋಧಕ ಭಾಷಣದಿಂದ ಮಹಾನಂದೆಯ ವಿಷಯವಾಗಿ ನಾನು ಮಾಡಿದ ಪ್ರಶಂಶೆಯು, ಅರ್ಭಕನು ಮಾಡಿದ ಅರಣ್ಯರೋದನವೆಂದು ತಿಳಿದೆಯಾ ?

**ಬೃಹಸ್ಪತಿಃ**— ಮಹಾನ್ ಮಹಾನಂದೆಯು ವಾರಾಂಗನೆಯಾಗಿದ್ದು ದೇವೇಂದ್ರನಿಗೆ ಸಹ ವಶವಾಗಲಾರಳು, ಹೀಗೆಂದು ತಾವು ಈ ಮೊದಲೇ ಹೇಳಿದಿರಲ್ಲವೇ ? ಇದು ಅದರ ಪ್ರತ್ಯುತ್ತರವಾಗಿರುವದು ಹೀಗೆ ತಿಳಿಯಿರಿ. ಅಂದರೆ ಆಯಿತು.

**ಇಂದ್ರಃ**— ಛೀ ಛೀ ದೇವಮುನಿಯೇ ನನ್ನ ಆಶ್ರಿತ ಜನರ ವಿಷಯದಲ್ಲಿ ಅಭಿಮಾನವೆನಿಸಿ, ಸತ್ಪಥವನ್ನು ಎಂದಿಗೂ ಬಿಡದಂಥಾ ಚತುರ್ವೇದ ಪ್ರಾಜ್ಞರಾದ ಬ್ರಹ್ಮದೇವರ ನಾಮವನ್ನು ನಾನು ಸಹಜವಾಗಿ ಉಚ್ಚರಿಸಿದೆನು, ವಾದವಿವಾದದಲ್ಲಿ ಪ್ರತಿಪಕ್ಷದವರ ಮಾನಖಂಡನ ಮಾಡುವಂಥ ಗ್ರಾಮ್ಯಜನಗಳಂತೆ “ ಶೇಷಂ ಕೋಪೇನ ಪೂರಯೇತ ” ಹೀಗೇನು ನಾನು

ಭಾಷಣ ಮಾಡಲಿಲ್ಲ, ತಮಗೆ ಅದರಲ್ಲಿಯೂ ಸಂಶಯವಿದ್ದರೆ ಅವರ ಬಗ್ಗೆ ನಾನು ಕ್ಷಮೆಯನ್ನು ಬೇಡುವೆನು.

**ನಾರದ.**— ಒಳ್ಳೇದು ದೇವೇಂದ್ರಾ ಯಾರ ವಿಷಯವಾಗಿ ನಿನಗೆ ಇಷ್ಟೊಂದು ಅಭಿಮಾನವೆನಿಸುವದೋ, ಆ ನಿನ್ನ ದೇವಲೋಕದ ವಾರಾಂಗನೆಯಾದರೂ ಎಂಥವರಿರುವರು.-ಅವರನ್ನಾದರೂ ಒಮ್ಮೆ ನಾನು ನೋಡುವೆನು.

**ಇಂದ್ರ:**— ಯಾರಲ್ಲಿ ?

**ಸೇವಕ:**— ಮಹರಾಜ !

**ಇಂದ್ರ:**— ದ್ವಾರಪಾಲಕಾ ! ನೀನು ನಂದನವನಕ್ಕೆ ಹೋಗಿ, ರಂಭಾ, ಊರ್ವಸಿ, ಮೇನಕಾ, ತಿಲೋತ್ತಮಾ ಮುಂತಾದ ಅಪ್ಸರೆಯರನ್ನು ಬೇಗನೆ ಕರೆದು ಕೊಂಡು ಬಾ.

**ವಿಶ್ವಾಮಿತ್ರ:**— ದೇವಋಷಿಯೇ ತಾವು ಈ ದೇವಲೋಕದ ವಾರಾಂಗನೆಯರ ಬೆನ್ನು ಹತ್ತಬೇಡಿರಿ. ಇದರಿಂದ ಬಹಳ ಕಷ್ಟವಾದೀತು.

**ನಾರದ:**— ಛೀ ಛೀ ತಾವು ಅವರ ಬೆನ್ನು ಹತ್ತಿ ಶ್ವಾನವಾದಿರಿ. ಆದರೆ ನಾನು ಮಾತ್ರ ಅವರ ಸ್ವರೂಪವನ್ನಷ್ಟೇ ನೋಡಬೇಕೆಂದಿರುವೆನು. ನನಗೆ ಅ ಬೆನ್ನು ಹತ್ತುವದೂ ಬೇಡಾ ! ಆ ಕಷ್ಟವೂ ಬೇಡಾ !

**ವಸಿಷ್ಠ:**— ದೇವೇಂದ್ರಾ ! ಈ ದೇವಋಷಿಗಳು ಏನಾದರೊಂದು ವಾದವನ್ನು ಉಪಸ್ಥಿತ ಮಾಡುವ ವಿಚಾರದಲ್ಲಿರುವರು. ನೀನು ಇವರ ಬೆನ್ನು ಹತ್ತಿದರೆ ಏನಾದರೂ ಸಂಕಟಕ್ಕೆ ಗುರಿಯಾಗುವಿ. ಮಹಾನಂದೆಯು ರಂಭಾ ಮೇನಕೆಯರಿಗಿಂತಲೂ ಅಧಿಕ ರೂಪವತಿಯಾಗಿದ್ದರೂ ನಿನ್ನ ಯೋಗ್ಯತೆ ಏನು ಕಡಿಮೆ ಯಾದಂತಾಯಿತು.

**ನಾರದ:**— ಇದಕ್ಕೇನು ಹೇಳಬೇಕು ? ಇದು ತರುಣ ಜನರಿಗೆ ಸಂಬಂಧಿಸಿದ ವಿಷಯವಾಗಿರುವದು.

**ವಸಿಷ್ಠ**:— ಹೀಗೇನು. ಅಂದಮೇಲೆ ದೇವಋಷಿಗಳೇ ಈ ಕಾರ್ಯ ದಲ್ಲಿ ನಮ್ಮಂಥಾ ವೃದ್ಧರ ಕೆಲಸವೇನಿರುವದು ? ನಡೆಯಿರಿ. ನಿತ್ಯಕರ್ಮ ಗಳನ್ನಾದರೂ ಮಾಡೋಣ. ( ವಸಿಷ್ಠ ಹೋಗುವನು. )

**ನಾರದ**:— ದೇವೇಂದ್ರಾ ಅವರು ಹೋಗಲಿ. ಈ ದಿನ ಈ ಮಹ ತ್ವವಾದ ವಾದವನ್ನು ನಾವೇ ಪೂರೈಸೋಣ.

( **ದ್ವಾರಪಾಲಕ ಬರುವನು.** )

**ಇಂದ್ರ**:— ಏಕೆ ? ಒಬ್ಬನೇ ಮರಳಿಬಂದೆ ?

**ದ್ವಾರಪಾಲಕ**:— ದೇವಾಧಿದೇವಾ ! ನಂದನವನದಲ್ಲಿ ವಾರಾಂಗ ನೆಯರು ಯಾರೂ ಇಲ್ಲ.

**ವರುಣ**:— ಎಲೋ ಆಭೋದ ಸರೋವರಕ್ಕೆ ಹೋಗಿ ಅವರನ್ನು ಕರೆದು ಕೊಂಡು ಬಾ. ಅಲ್ಲಿ ಅವರು ಜಲಕ್ರೀಡೆ ಯಾಡುತ್ತಿರಬಹುದು.

**ದ್ವಾರ**.;— ಮಹರಾಜ ! ಅಲ್ಲಿ ಸಹ ನೋಡಿ ಬಂದೆ; ಅಲ್ಲಿ ಬರೇ ಕಪ್ಪೆಗಳೇ ದೃಷ್ಟಿಗೆ ಬಿದ್ದವು.

**ವರುಣ**:— ಮೂರ್ಖಾ ! ಅಲ್ಲಿ ಅವರು ಇಲ್ಲದಿದ್ದರೆ ಕಲ್ಪವೃಕ್ಷದ ಉದ್ಯಾನದಲ್ಲಿ ಹೋಗಿ ನೋಡು, ಅವರು ಅಲ್ಲಿಗೆ ವಿಶ್ರಾಂತಿ ಗೋಸ್ಕರ ಹೋಗಿರಬಹುದು.

**ದ್ವಾರ**:— ಮಹರಾಜ ಅಲ್ಲಿಯೂ ನೋಡಿದೆ. ಅಲ್ಲಿ ಬರೇ ಕೋತಿ ಗಳೇ ಹಾರ್ಯಾಡುತ್ತಿದ್ದವು.

**ಇಂದ್ರ**:— ಎಲವೋ ! ನಾಲ್ಕು ಕಡೆಗೂ ಚನ್ನಾಗಿ ನೋಡಿ, ಕರೆದು ಕೊಂಡುಬಾ. ಮತ್ತು ದೇವಋಷಿಯಾದ ನಾರದರು ಬಂದಿರುವರು; ಅವ ರನ್ನು ಮೋಹಿಸುವದಕ್ಕಾಗಿ ಚನ್ನಾಗಿ ಶೃಂಗರಿಸಿಕೊಂಡು ನಟಿಸಿಕೊಂಡು ಬರುವದಕ್ಕೆ ಅವರಿಗೆ ಹೇಳು.

**ದ್ವಾರ**.:— ದೇವಲೋಕದ ಸಂದಿಗುಂದಿಗಳಲ್ಲೆಲ್ಲಾ ಅವರನ್ನು

ಹುಡುಕಿದೆನು. ಆದರೆ ಒಬ್ಬಸ್ತ್ರೀಯಾದರೂ ನನ್ನ ದೃಷ್ಟಿಗೆ ಬೀಳಲಿಲ್ಲ.

ಇಂದ್ರಃ— ವರುಣಾ ? ಇವರ ಅರ್ಥವಾದರೂ ಏನಿರಬಹುದು.

ನಾರದಃ— ಇದರ ಅರ್ಥವೇನಂದರೆ? ನಿನ್ನ ಸ್ವರ್ಗಲೋಕದ ದೇವಾಂಗನೆಯರು ನಾನು ಈಗಲೇ ಹೇಳಿದ ಮೃತ್ಯುಲೋಕದ ಮಹಾನಂದೆಯ ಸ್ವರೂಪಕ್ಕೆ ಮೋಹಿಸಿ, ಅವಳಿಗೆ ದಾಸಿಯರಾಗಿ, ಅವಳ ಮನೆಯಲ್ಲಿ ವಾಸವಾಗಿರುವರು. ಬೇಕಾದರೆ ಪ್ರತ್ಯಕ್ಷವಾಗಿ ಹೋಗಿ ಪರೀಕ್ಷಿಸು; ಮತ್ತು ಈಗ ಕೇವಲ ಪರೀಕ್ಷೆಯ ಸಮಯವೇ ಬಂದಿರುವದರಿಂದ ನಾನು ಹೇಳುವದೇನಂದರೆ, ನಿನ್ನ ಊರ್ವಶಿಯನ್ನು ನೋಡಿ ಹೇಗೆ ನಮ್ಮ ತೀರ್ಥರೂಪರು ಲಟಿಪಟಿಸಿ ಹೋಗಿರುವರೋ, ಅದರಂತೆ ನಮ್ಮ ಮಹಾನಂದೆಯನ್ನು ನೋಡಿ ಬರೀ ಒಬ್ಬ ದೇವೇಂದ್ರನೇ ಅಲ್ಲ, ದೇವೇಂದ್ರನ ದೇವೇಂದ್ರನು ಕೂಡಾ ವಶಮಾಡಿಕೊಳ್ಳಲು ಅಸಾಧ್ಯವಾಗಿರುವದು.

ಇಂದ್ರಃ— ಏನು ? ಅವಳು ವಾರಾಂಗನೆಯಾಗಿದ್ದು ನನಗೆ ವಶವಾಗುವದಿಲ್ಲವೆಂದು ಹೇಳುವಿರಾ ?

೭. ರಾಗ ಕೇದಾರ ತಾಳ ಏಕ್ಕಾ.

**ವನಿತೆ॥ ಅವಳೆಂಥ ವಾರ ‖ಪಲ್ಲ‖ ಧನದಾಸೆಯನ ತಾ**
**ತ್ಯಜಿಸುತೆ। ಅನುದಿನ ಬಿಡದೆ ಮುದದಿ ಶಿವವ್ರತವೆಸ**
**ಗುತಲಿಹಳ್ ॥ಪಲ್ಲ॥ ನಾನೀಗ ಪೋಗಿ । ಜಾಣ್ಮೆಯ**
**ತೋರೀ॥ ವನಿತಾ ಪ್ರೀತಿ ಸಂಪಾದಿಪೇನ್ ‖೧‖**

ನಾರದಃ— ದೇವೇಂದ್ರಾ ಕೈಯಲ್ಲಿರುವ ಕಂಕಣವನ್ನು ನೋಡುವದಕ್ಕೆ ಕನ್ನಡಿಯೇತಕ್ಕೆ ಬೇಕು. ನೀನು ಈಗ ಒಳ್ಳೇ ತ್ವೇಷದಿಂದ ಸಿಂಹಾಸನವನ್ನು ಬಿಟ್ಟು ಕೆಳಗೆ ಇಳಿದಿರುವೆ. ಹೀಗೇ ಮೃತ್ಯುಲೋಕಕ್ಕೆ ಹೋಗು ಮತ್ತು ಆ ಮಹಾನಂದಿಯನ್ನು ವಶಮಾಡಿಕೊಂಡು ಬಾ- ಅಂದರೆ ನಾನು ನಿನಗೆ ಹೌದೆನ್ನುವೆನು.

**ವಿಶ್ವಾ:**— ದೇವೇಂದ್ರಾ ಹೋಗು. ನಿಶ್ಚಯವಾಗಿಯೂ ನಿನಗೆ ಈ ಕಾರ್ಯದಲ್ಲಿ ಯಶವು ದೊರೆಯಲೇ ಬೇಕು.

**ನಾರದ:**— ಓಹೋ ದೊರೆಯಲೇಬೇಕು. ಮೇನಕೆಯ ವಶಪ್ರಾಪ್ತಿಯಲ್ಲಿ ಇವರಿಗೆ ಹೇಗೆ ಯಶವು ದೊರೆಯಿತೋ ಹಾಗೆಯೇ

(ನಾರದ ವಿಶ್ವಾಮಿತ್ರ ಹೋಗುವರು.)

**ವರುಣ:**— ವಾದಿಸುವ ಭರದಲ್ಲಿ ನೀನು ಪಂಥವನ್ನು ಮಾಡಿದೆ. ಇನ್ನು ಮುಂದೆ ಹೇಗೆ ?

**ಇಂದ್ರ:**— ಮುಂದೇನು ? ಪಂಥ ಮಾಡಿದಂತೆ ಮಹಾನಂದೆಯನ್ನು ವಶಮಾಡಿಕೊಂಡು ಸ್ವರ್ಗದಲ್ಲಿ ತಂದಿರಿಸುವದು.

**ವರುಣ:**— ಅಂದರೆ ಅವಳು ಹೇಗೆ ವಶವಾಗಬೇಕು ?

**ಇಂದ್ರ:**— ವರುಣಾ. ನೀನು ಸಹಾ ನನಗೆ ಆ ನಾರದನಂತೆ ಬೆಪ್ಪನಾಗಿ ತೋರುತ್ತಿ ? ವೇಶ್ಯಾಂಗನೆಯರು ವಸ್ತುವಿನ ಮೇಲೆ ಪ್ರೇಮ ಮಾಡುತ್ತಾರೆ, ಆದರೆ ವ್ಯಕ್ತಿಯ ಮೇಲೆ ಪ್ರೇಮ ಮಾಡುವದಿಲ್ಲ. ಇಂಥಾ ಒಬ್ಬ ವೇಶ್ಯಾಂಗನೆಯು ನನ್ನ ಮೇಲೆ ಪ್ರೇಮ ಮಾಡುತ್ತಾಳೆಂದು, ಯಾವನಾದರೂ ಅನ್ನುತ್ತಿದ್ದರೆ ಅವನಂಥಾ ಮೂರ್ಖನು ಮತ್ಯಾರೂ ಇಲ್ಲ, ಹೀಗೆ ನನ್ನ ಅಭಿಪ್ರಾಯವದೆ. ಒಬ್ಬನ ಕೊರಳಲ್ಲಿ ಒಂದು ಸುಂದರವಾದ ಮುತ್ತಿನ ಹಾರವನ್ನು ನೋಡಿದ ಕೂಡಲೇ ಆ ವೇಶ್ಯಾಂಗನೆಯು, ಅವನ ಕೊರಳಿಗೆ ಬಿದ್ದಳೇ. ಆದರೆ ಆ ಕೊರಳು ಮನಷ್ಯವದೇ ಇರಲಿ; ಅಥವಾ ಪಶುವಿನದೇ ಇರಲಿ; ಅದರ ಯೋಚನೇಯೇ ಇಲ್ಲ.

**ವರುಣ:**— ಅಂದರೆ ! ವೇಶ್ಯಾಂಗನೆಯರಿಗೆ ದ್ರವ್ಯವಾಸನೆಯೇ ವಿಶೇಷ. ಕಾಮವಾಸನೆಯು ಲೇಶಮಾತ್ರವಾದರೂ ಇಲ್ಲ, ಹೀಗೆ ನಿನ್ನ ಅಭಿಪ್ರಾಯವೋ ?

**ಇಂದ್ರ:**— ಇದೆ ! ಆದರೆ ಅದು ಬಹುದಕ್ಷಿಣೇಚ್ಛು ಯಾಚಕರ ಕ್ಷುಧೆಯಂತಿರುವದು.

**ವರುಣಃ**— ಅಂದರೆ ಹೇಗೆ ?

**ಇಂದ್ರಃ**— ಮನಸ್ಸಿನಂತೆ ದಕ್ಷಿಣೆಯು ಸಿಕ್ಕದೇ, ಬ್ರಾಹ್ಮಣರಿಗೆ ಪಂಚಪಕ್ವಾನ್ನದಿಂದ ಆಕಂಠ ಭೋಜನ ಮಾಡಿಸಿದಗೂ, ಅದರಿಂದ ಅವರು ಹೇಗೆ ತೃಪ್ತರಾಗುವದಿಲ್ಲವೋ! ಅದರಂತೆ ವೇಶ್ಯಾಂಗನೆಯರಿಗೆ ಅವರ ಇಚ್ಛೆಯಂತೆಹಣವು ದೊರಕುವ ತನಕ ಅವರ ಕಾಮವಾಸನೆಯು ತೃಪ್ತವಾಗುವದಿಲ್ಲ, ಹೀಗೆ ನನ್ನ ನಿಶ್ಚಯವಿರುವದು. ಸ್ವರ್ಗಲೋಕದ ನಾಲ್ಕಾರು ಅಮೌಲ್ಯ ಅಲಂಕಾರಗಳನ್ನು ಆ ಮಹಾನಂದೆಯ ಕೊರಳಲ್ಲಿ ಹಾಕಿದರೆ ಸಾಕು, ಅವಳನ್ನು ಬೇಕಾದಹಾಗೆ ಎಳೆದುಕೊಂಡು ಬರಬಹುದು.

**ವರುಣಃ**— ಇನ್ನು ಮೃತ್ಯುಲೋಕಕ್ಕೆ ಹೋಗುವ ಬಗೆ ಹೇಗೆ ?

**ಇಂದ್ರಃ**— ಈ ದಿವ್ಯ ದೇಹವನ್ನು ತ್ಯಾಗಮಾಡಿ ಪಂಚಭೂತಾತ್ಮಕವಾದ ದೇಹವನ್ನು ಧರಿಸಿ, ಮಹಾ ಧನಾಢ್ಯನಾದ ಒಬ್ಬ ವ್ಯಾಪಾರಿಯ ವೇಷದಿಂದ ನಂದಿಗ್ರಾಮದಲ್ಲಿ ಪ್ರವೇಶ ಮಾಡಿ, ಮುಂದೆ ಪ್ರಸಂಗ ಬಂದಂತೆ ಸ್ವೀಕೃತ ಕಾರ್ಯಕ್ಕೆ ಪ್ರಾರಂಭ ಮಾಡೋಣ- ಆ ಮೇಲೆ.

ಲ. ಪೂರಿಯಾ, ತಾಳ ಝುಂಪಾ.

**ಆರಿಂಥ ಲೋಕ ಮೋಹಿನಿಯು । ಧರಾತಲದಿ ಮೆರೆಯು**
**ವಳು ರಮಣಿ । ನರವಶಕ ಸಾಧ್ಯಳೈ ॥**
**ನರವೇಷ ಧರಿಸೀ । ತರುಣಿಮಣಿಯನೀಗ । ತರುವೆ ವಶವ**
**ಗೈದು ॥ ೧ ॥**

( ಹೋಗುವರು. )

## ಪ್ರವೇಶ ೪.

### ಜಂಗಲ ರಸ್ತಾ.

( ನಾರದ ಪ್ರವೇಶಿಸಿ, )

**ನಾರದಃ**— ಮಾತೋಶ್ರೀ ಪಾರ್ವತೀದೇವಿಯ ಅವತಾರಿಯಾದ

(ಮಹಾನಂದಿ) ಯನ್ನು ವಶಮಾಡಿಕೊಂಡು ತರುವದಕ್ಕೋಸ್ಕರ ನಮ್ಮ ಇಂದ್ರ ಮಹಾರಾಜರು ಹೊರಟಿರುವರು. ಹೋಗಲಿ. ದುರ್ದೆಶಿಯಾಗಿ ಬಂದ ಮೇಲೆ ತಾನೇ ಗೊತ್ತಾಗುವದು. ಇವರಿಗೆ ಯಾವಾಗಲೂ ದುರ್ದಶೆಮಾಡಿಕೊಳ್ಳುವ ಅಭ್ಯಾಸವೇ ಇರುವದು. ಪರಸ್ತ್ರೀ ಅಪಹಾರಮಾಡಿದ ಬಗ್ಗೆ, ಬಾದಾವರ್ತಿ ಈ ರಾಜೇಶ್ರೀಗಳಿಗೆ ಸರ್ವಾಂಗಕ್ಕೆ ಛಿದ್ರಗಳು ಬಿದ್ದವು. ಆದರೆ ಮುಂದೆ ಆ ಛಿದ್ರಗಳೆಲ್ಲಾ ನೇತ್ರಗಳಾದ್ದರಿಂದ, ಪರಸ್ತ್ರೀ ಅಭಿಲಾಷೆ ಮಾಡುವದಂದರೆ, ಇದೊಂದು ಪ್ರಕಾರದ ಭೂಷಣವೇ ಎಂದು ಇವನಿಗೆ ಅನಿಸಹತ್ತಿತು. ಆದರೆ ದೇವೇಂದ್ರಾ! ಮೃತ್ಯುಲೋಕದ ವೇಶ್ಯಾವಿಲಾಸವು ಸ್ವರ್ಗಲೋಕದ ವೇಶ್ಯಾವಿಲಾಸಕ್ಕಿಂತಲೂ ಬಹಳೇ ಭಿನ್ನವಾಗಿರುವದು. ಅಲ್ಲಿ ಛಿದ್ರಗಳು ನೇತ್ರಗಳಾಗುವದು ಒತ್ತಟ್ಟಿಗಿರಲಿ. ಇರುವಂಥಾ ಕಣ್ಣು, ಮೂಗು, ಕಿವಿ, ಇವುಗಳ ನಿರ್ನಾಮವಾಗಿ, ಒಂದೇ ಸರಳರೇಖೆಯಲ್ಲಿ ಆರು ಛಿದ್ರಗಳು ಉತ್ಪನ್ನವಾಗುವವು. ಇರಲಿ, ಈಗ ನಾನೇನು ಮಾಡಬೇಕು? ಸರಿ. ಹೀಗೇ ಕೈಲಾಸಕೆ ಹೋಗಿ ಈ ಬೆಂಕೆಯನ್ನು ತಾತನಾದ ಶಂಕರನ ತೃತಿಯ ನೇತ್ರದಿಂದ ಹೆಚ್ಚು ಜಾಜ್ವಲ್ಯ ಮಾಡಿಸಿ, ನಾವು ಕ್ಷೀರಸಾಗರದಲ್ಲಿ ಅಡಗಿಕೊಳ್ಳಬೇಕು. ಆದರೆ ಹಾಗೆ ಬೇಡಾ. ಈ ಪ್ರಯೋಗದ ಸೂತ್ರಧಾರನು ನಾನೇ ಆಗಿರುವೆನು ಮತ್ತು ಅದರ ಕೊನೆಯಾದರೂ ನನ್ನಿಂದ ಆಗಬೇಕು. ಮತ್ತು ಈ ವಿಷಯವನ್ನು ಅಂತ್ಯದಲ್ಲಿ ಪರಮೇಶ್ವರನಿಂದಲೇ ಪ್ರಚಾರಗೊಳಿಸಬೇಕು. ಆದರೆ ಈ ಪ್ರಯೋಗದಲ್ಲಿ ಒಬ್ಬ ಸೂತ್ರಧಾರನಿಂದ ಕಾರ್ಯವು ಪೂರೈಸಲಾರದು. ಯಾವಳಾದರೊಬ್ಬ ನಟಿಯನ್ನು ಸಂಪಾದಿಸಬೇಕು. ವಹವ್ವಾ! ವಹವ್ವಾ! ಇಂದಿನ ವರೆಗೆ ಯಾರಿಗಾದರೂ ಸಂಕಟವದಗಿದರೆ ಅದರ ಪರಿಹಾರಮಾಡುವದಕ್ಕೆ ಆ ಸ್ಥಳದಲ್ಲಿ ನಾನು ಸಿದ್ಧನಾಗಿರಬೇಕಾಗುತ್ತಿತ್ತು. ಆದರೆ ಈ ಹೊತ್ತು ನನಗೆಯೇ ಸಂಕಟವದಗಿರುವದು. (ಶಿಸಿಯ ಕಡೆನೋಡಿ) ಓಹೋ! ಅದೋ ಅಲ್ಲಿ ತುಂಬರಸ್ವಾಮಿಗಳು ಬರುತ್ತಿರುವರು. ಅವರಿಗೆ ಈ ನಾಟಕದಲ್ಲಿ ನಟಿಯ ಭೂಮಿಕೆಯನ್ನು ಕೊಡಬೇಕು.

( ತುಂಬುರ ಬರುವರು. )

**ನಾರದ:**— ನಮೋ ನಮೋ ತುಂಬುರಸ್ವಾಮಿಗಳೇ ನಮೋ.

**ತುಂಬುರ:**— ನಮೋ ನಮೋ ಯಾರು ? ನಾರದಸ್ವಾಮಿಗಳೇನು ? ಇತ್ತಕಡೆ ತಾವು ಎಲ್ಲಿಗೆ ಸವಾರಿ.

**ನಾರದ:**— ತಮ್ಮ ಕಡೆಗೇ ಬರುತ್ತಲಿದ್ದೆ. ಆದರೆ ಅನಾಯಾಸವಾಗಿ ತಮ್ಮ ಭೆಟ್ಟಿಯಾಯಿತು.

**ತುಂಬುರ:**— ನನ್ನ ಕಡೆಗೆ ಏಕೆ ?

**ನಾರದ:**— ಸುಮ್ಮನೇ ಏನಾದರೂ ಮಾತನಾಡಿ ವ್ಯರ್ಥವಾಗಬಾರದು. ಮೊದಲು ವಚನ ಕೊಡಬೇಕು. ಅಂದರೆ ಕೆಲಸವೇನೆಂಬದನ್ನು ಹೇಳುತ್ತೇನೆ.

**ತುಂಬುರ:**— ಅಂದರೆ ವಚನವೇನೆಂದು ಕೊಡಬೇಕು ?

**ನಾರದ:**— ಕೆಲಸವನ್ನು ಮಾಡುತ್ತೇನೆಂದು.

**ತುಂಬುರ:**— ತಮ್ಮ ಕೆಲಸವೇನೂ ಕೆಟ್ಟ ಕೆಲಸವಾಗಿರಲಾರದು; ಹಿಡಿಯಿರಿ ವಚನವನ್ನು.

**ನಾರದ:**— ತಾವು ಈ ಚಾತುರ್ಮಾಸದಲ್ಲಿ ನನ್ನಗೋಸ್ಕರ ಸ್ತ್ರೀಯಾಗಿರಬೇಕು.

**ತುಂಬುರ:**— ಏನು ? ಸ್ತ್ರೀಯಾಗಿರಬೇಕೆ ? ಸರಿ; ಹಾಗಾದರೆ, ಈ ಚಾತುರ್ಮಾಸದಲ್ಲಿ ನನಗೆ ಒಳ್ಳೆ ವ್ರತವನ್ನು ಮಾಡುವದಕ್ಕೆ ಹೇಳಿದಿರಿ.

**ನಾರದ:**— ಸ್ವಾಮೀ ! ನನ್ನ ಸ್ತ್ರೀಯಾಗಬೇಕು ಹೀಗೇನೂ ನನ್ನ ಅಭಿಪ್ರಾಯವಲ್ಲ. ಸ್ತ್ರೀ ಅಂದರೆ ಹೆಂಗಸು.

**ತುಂಬುರ:**— ಇದು ಏನೆಂಬದು ನನಗೆ ತಿಳಿಯುವದಿಲ್ಲ. ಸ್ವಲ್ಪ ಸ್ಪಷ್ಟವಾಗಿ ಹೇಳಿರಿ.

**ನಾರದ:**— ಅಂದರೆ ? ನಾನು ದಾಸನಾಗುತ್ತೇನೆ. ನೀವು ದಾಸಿ

ಯಾಗಬೇಕು.

**ತುಂಬುರ**:— ಬಹಳ ನೆಟ್ಟಗೆ. ನೀವು ಜನರ ಕೈಕಾಲು ಒತ್ತಬೇಕು. ನಾನು ಪಾತ್ರೆ ಮುಂತಾದ್ದು ತಿಕ್ಕುವಳಾಗಬೇಕೊ ?

**ನಾರದ**:— ಪಾತ್ರೆ ಮುಂತಾದ್ದು ತಿಕ್ಕುವ ಅವಶ್ಯವೇನೂ ಇಲ್ಲ.

**ತುಂಬುರ**:— ಹಾಗಾದರೆ ದಾಸಿಯಾಗಿ ಮಾಡತಕ್ಕ ಕೆಲಸವೇನು?

**ನಾರದ**:— ಗಾಯನ, ನರ್ತನ, ಅಭಿನಯ.

**ತುಂಬುರ**:— ಹಾಗಾದರೆ ಅದಕ್ಕೇನೂ ಸ್ತ್ರೀಯಾಗುವ ಅವಶ್ಯಕತೆ ಇಲ್ಲ. ಅವನ್ನು ನನಗೆ ಈ ಪುರುಷ ವೇಷದಿಂದಲೇ ಮಾಡಲಿಕ್ಕೆ ಬರುವದು.

**ನಾರದ**:— ಛೀ ! ಛೀ ! ಈ ಪುರುಷ ವೇಷದಿಂದ ನರ್ತನ ಮಾಡುತ್ತಾ ಅಭಿನಯ ಮಾಡಿದರೆ, ಜನರು ನಗುವರು. ಸ್ತ್ರೀಯಾಗಿ ಅಭಿನಯ, ನರ್ತನ, ಮಾಡುವದರಲ್ಲಿ ಹೆಚ್ಚು ರಂಜನವಾಗಿ ತೋರುವದು.

**ತುಂಬುರ**:— ರಂಜನವಾಗುವದೇನೋ ನಿಜ. ಆದರೆ, ಇಂಥಾ ನಾಟಕ ರಂಜನವನ್ನು ಯಾವ ಸ್ಥಳದಲ್ಲಿ ಮಾಡಿತೋರಿಸಬೇಕು ?

**ನಾರದ**:— ಮೃತ್ಯುಲೋಕದಲ್ಲಿಯ ಒಬ್ಬ ವಾರಾಂಗನೆಯ ಮನೆಯಲ್ಲಿ.

**ತುಂಬುರ**:— ಅಹಾಹಾ ! ನಾರದ ಸ್ವಾಮಿಗಳೇ ಸೇವೆಯನ್ನು ಮಾಡುವವಕ್ಕೆ ಒಳ್ಳೇ ಪವಿತ್ರವಾದ ಸ್ಥಳವನ್ನೇ ಶೋಧಿಸಿದಿರಿ.

**ನಾರದ**:— ಮತ್ತೇನು ? ಒಬ್ಬ ಅಗ್ನಿಹೋತ್ರಿಯ ಮನೆಯಲ್ಲಿ ಹಾಡುತ್ತಾ, ಕುಣಿಯುತ್ತಾ ಕೂಡ್ರಬೇಕೋ ? ನಿಮಗೆ ಅದರ ಭಯವೇತಕ್ಕೆ ನಾನುಸಹಾ ಅವಳ ಮನೆಗೆ ಬರತಕ್ಕ ಒಬ್ಬ ಧನಾಢ್ಯನಾದ ಯಜಮಾನನ ದಾಸನಾಗತಕ್ಕವನಿದ್ದೇನೆ.

**ತುಂಬುರ**:— ಸ್ವಾಮೀ ನಿಮ್ಮದೆಲ್ಲಾ ನೆಟ್ಟಗೆ ಸರಿ ಆದರೆ ನಾನು ಯಾವಳ ದಾಸಿಯಾಗಿರುವೆನೋ ಅವಳ ಮನೆಯಲ್ಲಿ ಯಾವನಾದರೊಬ್ಬ

ಹಿಮ್ಮೇಳದವನು ನನ್ನ ಮೇಲೆ ಕಣ್ಣಿಟ್ಟು, ಗಂಟು ಬಿದ್ದರೆ ಮಾತ್ರ ನನ್ನ ಗತಿ ಏನು?

**ನಾರದಃ**— ಅದರಲ್ಲೇನು? ನಾನು ಸಹ ಪೂರ್ವದಲ್ಲಿ ಅರವತ್ತು ಸಂವತ್ಸರಗಳವರೆಗೆ ಒಬ್ಬ ಋಷಿಪತ್ನಿಯಾಗಿ ಕಾಲಕಳೆಯಲಿಲ್ಲೇನು? ಆತನಿಂದಲೇ ನನಗೆ ಅರವತ್ತು ಮಕ್ಕಳಾದವು.

**ತುಂಬುರಃ**— ಒಳ್ಳೇದು. ಇಷ್ಟೊಂದು ಘಟಾಟೋಪ ಮಾಡಿ ಮುಂದೆ ಮಾಡತಕ್ಕ ಶತಕೃತ್ಯವಾದರೂ ಯಾವದು? ಬೇಕಾದರೆ ಈ ಚಾತುರ್ಮಾಸದಲ್ಲಿ ಶೇಷಶಾಯಿ ಭಗವಂತನ ಮುಂದೆ ದಿನಾಲು ಪ್ರಹರ ಎರಡು ಪ್ರಹರ ಗಾಯನ ಮಾಡಲಿಕ್ಕೆ ಹೇಳಿದರೆ, ಮಾಡುತ್ತೇನೆ. ಬೇಕಾದರೆ, ನಿನು ತೀರ್ಥರೂಪರ ಎದುರಿಗೆ ಗಾಯತ್ರಿಪ ನಶ್ಚರಣೆ ಮಾಡುವದಕ್ಕೆ ಹೇಳಿದರೆ, ಮಾಡುತ್ತೇನೆ. ಮತ್ತು ಬೇಕಾದರೆ, ಕೈಲಾಸನಾಥನ ಮುಂದೆ ರುದ್ರಾವರ್ತನ ಮಾಡುವದಕ್ಕೆ ಹೇಳಿದರೆ ಮಾಡುತ್ತೇನೆ. ಇಂಥಾದ್ದೇನಾದರೂ ಪವಿತ್ರಕಾರ್ಯ ಮಾಡುವದಕ್ಕೆ ಹೇಳುವದನ್ನು ಬಿಟ್ಟು, ನಾನು ವಾರಾಂಗನೆಯ ದಾಸಿಯಾಗಬೇಕಂತೆ. ಹೀಗೆ ಅಮೃತವನ್ನು ಬಿಟ್ಟು, ಅಂಬಲಿ ಕುಡಿಯುವ ಅಪೇಕ್ಷೆ ಏತಕ್ಕೆ?

**ನಾರದಃ**— ಮಾತೋಶ್ರೀಯ ಸಲುವಾಗಿ ಮಾಡಬೇಕು.

**ತುಂಬುರಃ**— ಮಾತೋಶ್ರೀ? ಮಾತೋಶ್ರೀ ಯಾರು?

**ನಾರದಃ**— ನಿಮ್ಮ ನಮ್ಮ ಯಾವತ್ತು ಜಗತ್ತಿನ ಮಾತೋಶ್ರೀಯು.

**ತುಂಬುರಃ**— ಇದೋ ನೋಡಿರಿ. ಏನಿರುವದೋ ಅದನ್ನು ಸ್ಪಷ್ಟವಾಗಿ ಹೇಳಿರಿ. ನಿಮ್ಮ ಸಂದಿಗ್ಧ ಭಾಷಣವು ನನಗೆ ತಿಳಿಯುವದಿಲ್ಲ.

**ನಾರದಃ**— ಹಾಗಾದರೆ ಹೀಗೆ ಬನ್ನಿ. (ಕಿವಿಮಾತು.) ಇದಕ್ಕಾಗಿ ನೀವು ದಾಸಿಯಾಗಬೇಕು. (ಕಿವಿಮಾತು.) ಇದಕ್ಕಾಗಿ ನಾನು ದಾಸನಾಗುತ್ತೇನೆ.

**ತುಂಬುರ:**— ಹೀಗಿದ್ದರೆ ನನಗೆ ಈ ಮೊದಲೇ ಏಕೆ ಈ ವಿಷಯವನ್ನು ತಿಳಿಸಲಿಲ್ಲ ?

**ನಾರದ:**— ಈಗಲಾದರೂ ತಿಳಿಯಿತೋ ಇಲ್ಲವೋ ? ಇನ್ನು ಬೇಗನೇ ಸ್ತ್ರೀ ರೂಪವನ್ನು ಧರಿಸಿರಿ.

**ತುಂಬುರ:**— ಏನು ? ಇಂಥಾ ಹೊರಗಿನ ಬೈಲು ಪ್ರದೇಶದಲ್ಲಿಯೇ ?

**ನಾರದ:**— ಒಳ್ಳೇದು. ನೀವು ಈ ಗಿಡದ ಮರೆಯಾಗಿರಿ. ನಾನು ಹೋಗುತ್ತೇನೆ. ( ಹೋಗುವರು. )

( ನಾರದ ತುಂಬುರರು ದಾಸ, ದಾಸಿ ವೇಷದಿಂದ ಪ್ರವೇಶಿಸಿ, )

೯. ರಾಗ ಸಾರಂಗ, ತಾಳ, ಕೇರವಾ-

**ನಟಜನವೇಷ ನಿಜದಿ ಸೋಜಿಗವೈ । ಬಹು ಸೋಜಿಗವೈ**
**ಬಹು ಸಾಹಸವೈ ॥**
**ಬಾಹ್ಯಾಂಗದೊಳು ಸುಂದರ ರೂಪ । ದೇಹಾಂತರದೆ**
**ಅಸ್ವಸ್ವರೂಪ ॥ ೧ ॥**
**ಬಾಹ್ಯಾಂತರದ ಕೃತಿಯು ವಿರೋಧ । ಸ್ನೇಹ ದ್ರೋಹ**
**ಸುಖ ದು:ಖ ವಿಕಾರಾ ॥**

## ಪ್ರವೇಶ ೫.

**( ನಂದಿಗ್ರಾಮದೊಳಗಿನ ರಸ್ತೆ. )**

( ಬ್ರಹ್ಮಾನಂದನ ಪ್ರವೇಶ. )

**ಬ್ರಹ್ಮಾನಂದ:**— ಭಿಕ್ಷುಕ ಜನರು ಶ್ರಾದ್ಧದ ಅಮಂತ್ರಣ ಬಂದ ಕೂಡಲೇ, ಆ ದಿವಸ ಎರಡೆರಡು ಮೂರು ಮೂರು ಪ್ರಹರ ಸ್ನಾನಸಂಧ್ಯಾದಿ ಕರ್ಮಗಳನ್ನು ಬೆಳೆಯಿಸಿ, ಯಜಮಾನನಿಗೆ ಬಹಳ ಕಷ್ಟಕ್ಕೆ ಗುರಿಮಾಡುತ್ತಾರೆ. ಅದರಂತೆ ನಮ್ಮ ಹಿಮ್ಮೇಳದವರು ಗಾಯನವು ಒಳ್ಳೇ ರಂಗಿಗೆ ಬರುವ ಸಮಯದಲ್ಲಿ ಗಾಯಕರ ಮನಸ್ಸನ್ನು ವಿರಸ ಮಾಡಿ,ಬಿಡುತ್ತಾರೆ.

ಈಗ ನಮ್ಮ ಮೃದಂಗ ಮತ್ತು ಸಾರಂಗ ಬಾರಿಸುವವರು ಎಲ್ಲಿಗೋ ಹೋಗಿರುವರು. ಅವರ ವರ್ತಮಾನವೇ ಇಲ್ಲ. ಮಧ್ಯಾನ್ಹದಲ್ಲಿ ಮಿತಿಮೀರಿ ಊಟಮಾಡಿರುವದರಿಂದ, ಅದನ್ನು ಪಚನ ಮಾಡುವದಕ್ಕೋಸ್ಕರ ಎಲ್ಯಾದರೂ ಗಾಂಜಿ ಸೇವಿಸುತ್ತಾ ಕುಳಿತಿರಬಹುದು. ಈಗ ಪ್ರತಿಯೊಂದು ಮನೆಗೆ ಹೋಗಿ ಅವರನ್ನು ಶೋಧಮಾಡವದಕ್ಕಿಂತಲೂ, ಬೀದಿಯಲ್ಲಿಯೇ ಅವರನ್ನು ಕೂಗುತ್ತಾ ಹೊಗಬೇಕು. ಅಂದರೆ ಅವರು ಎಲ್ಲಿದ್ದರೂ ಅಲ್ಲಿಂದ ಹೊರಗೆ ಬರುವರು. ಎಲೋ ಏ ಮೃದಂಗ ಬಾರಿಸುವವನೇ ? ಏ ಸಾರಂಗ ಬಾರಿಸುವವನೇ ? ಬನ್ನಿರೋ ಬೇಗ ಬನ್ನಿ ! ಸರ್ವ ಗಾಯಕರು ಬಂದು ಕುಳಿತಿರುವರು.

( ಇಂದ್ರ ವರುಣ ಸಾಹುಕಾರ ವೇಷದಿಂದ ಪ್ರವೇಶ. )

**ವರುಣಃ**—ದೇವೇಂದ್ರಾ! ಇಕೋ ನೋಡು ಯಾವನೋ ಒಬ್ಬನು, ಗಾಯಕರು ಬಂದು ಕುಳಿತಿರುವರೆಂದು ಅಮಂತ್ರಣ ಕೊಡುತ್ತಾ ಹೋಗುತ್ತಿರುವನು. ನಾವು ಸಹಾ ಅವನ ಹಿಂದಿನಿಂದಲೇ ಹೋಗುವಾ. ಅಂದರೆ ನಮಗೆ ಈ ಊರಲ್ಲಿ ವಾರಾಂಗನೆಯರು ಒಂದೇ ಸ್ಥಳದಲ್ಲಿ ನೋಡಲಿಕ್ಕೆ ದೊರೆಯುವರು.

**ಇಂದ್ರಃ**— ಒಳ್ಳೇದು ನಡೆ. ( ಬ್ರಹ್ಮಾನಂದನೊಡನೆ ) ಎಲೈ ಮನುಷ್ಯನೇ ! ಸ್ವಲ್ಪ ನಿಂತು ನಮ್ಮೊಡನೆ ನಾಲ್ಕು ಶಬ್ದಗಳನ್ನು ಮಾತಾಡುವಿಯಾ ?

**ಬ್ರಹ್ಮಾ.ಃ**— ಓಹೋ ! ನಾಲ್ಕೇ ಶಬ್ದಗಳು ಏಕೆ ? ಪಾತ್ರಾಪಾತ್ರವನ್ನು ನೋಡಿ, ನಾಲ್ಕು ಸಾವಿರ ಶಬ್ದಗಳನ್ನು ಸಹಾ ಮಾತನಾಡುವೆನು. ಒಳ್ಳೇದು ತಾವು ಯಾರು ? ಮತ್ತು ಇಲ್ಲಿಗೆ ಬರವದಕ್ಕೆ ಕಾರಣವೇನು ? ಇದನ್ನೆಲ್ಲಾ ಹೇಳುವಿರಾ ?

**ವರುಣಃ**— ನಾವು ವ್ಯಾಪಾರಿಗಳು ! ಇವರ ಹೆಸರು ಪುರಂಧರ ಶೆಟ್ಟಿ. ನನ್ನ ಹೆಸರು ಅಪತ್ತಿ ಶೆಟ್ಟಿ.

**ಬ್ರಹ್ಮಾ**:— ವಹವ್ವಾ! ಹೆಸರುಗಳಂತೂ ದೇವಮನುಷ್ಯರಂತೆ ಕಾಣುತ್ತದೆ. ಒಳ್ಳೇದು ಇರುವ ಸ್ಥಳ?

**ವರುಣ**:— ಅಮರಾವತಿ.

**ಬ್ರಹ್ಮಾ**:— ಅಂದರೆ? ಮೃತ್ಯುಲೋಕದೊಳಗಿನ ದೇವನಗರವೇ? ದೇವಲೋಕದೊಳಗಿನ ಈ ದೇವಮನುಷ್ಯರು ಯಾವಳಾದರೊಬ್ಬ ದೇವಾಂಗನೆಯ ಕೂಡ ಅಮೃತಪಾನಮಾಡುವದಕ್ಕೆ ಸಂಚಾರ ಮಾಡುತ್ತಿರಬಹುದು. ಒಳ್ಳೇದು! ಇಲ್ಲಿ ಬರಲು ಕಾರಣ?

**ವರುಣ**:— ಅದು ಬಹು ಸೂಕ್ಷ್ಮವಾಗಿರುವದು.

**ಬ್ರಹ್ಮಾ**:— ಹಾ! ಅಂತೇ ನಾನು ವಿಚಾರಿಸುತ್ತೇನೆ. ಸುಮ್ಮನೆ ಹಾಳುಹರಟೆ ವಿಷಯವಲ್ಲಿ ನಾನು ಸ್ವಲ್ಪವಾದರೂ ಮನಸ್ಸು ಹಾಕುವವನಲ್ಲ.

**ವರುಣ**:— ಒಳ್ಳೇದು! ನಿಮ್ಮ ಹೆಸರು, ಉದ್ಯೋಗ ಮುಂತಾದ್ದನ್ನು ಮೊದಲು ತಿಳಿಸಿರಿ; ಅಂದರೆ ನಮ್ಮ ಕಾರ್ಯದಲ್ಲಿ ನಿಮ್ಮ ಉಪಯೋಗವಾಗುವದೋ ಹೇಗೆ ನೋಡೋಣ.

**ಬ್ರಹ್ಮಾ**:— ನನ್ನ ಹೆಸರು ಬ್ರಹ್ಮಾನಂದ; ನಾನು ಇಲ್ಲಿಯ ಸುಸ್ವರೂಪಿಗಳಾಗಿಯೂ, ಧನಾಢ್ಯರಾಗಿಯೂ ಇರುವ ಸರ್ವ ವಾರಾಂಗನೆಯರಿಗೆ ಬಂಧು ಸಮಾನನಾಗಿರುವೆನು. ಅರ್ಥಾತ್ ನನ್ನ ಉದ್ಯೋಗವೆಂದರೆ, ತಮ್ಮಂಥವರ ಪರಿಚಯುವನ್ನು ನನ್ನ ಅಕ್ಕತಂಗಿಯರಿಗೆ ಮಾಡಿಸುವದು. ಇನ್ನಾದರೂ ಹೇಳಿರಿ. ನಿಮ್ಮ ಕಾರ್ಯವು ಇದಕ್ಕಿಂತಲೂ ಸೂಕ್ಷ್ಮವಾದದ್ದೇನು?

**ವರುಣ**:— ಸರಿ ಸರಿ. ನಮ್ಮ ಕಾರ್ಯವಾವರೂ ಇದೆ. ನೀನು ಒಳ್ಳೇ ಧೂರ್ತನಿರುತ್ತೀ?

**ಬ್ರಹ್ಮಾ**:— ಓಹೋ! ನಾನು ಧೂರ್ತನೇ ಇರುತ್ತೇನೆ. ತಮ್ಮಂಥಾ ಶೃಂಗಾರದ ವಿಟಪುರುಷರು ಬೀದಿಯಲ್ಲಿ ಯಾವ ಉದ್ದೇಶದಿಂದ ತಿರಗುತ್ತಾ

ರೆಂಬುವನ್ನು ಕಂಡು ಹಿಡಿದು, ಅವರ ಪರಿಚಯವನ್ನು ಮಾಡಿಕೊಳ್ಳುವದೇ ನಮ್ಮ ಉದ್ಯೋಗದ ಮುಖ್ಯ ತತ್ವವು.

**ವರುಣಃ**— ಅದು ಹೇಗೆ ?

**ಬ್ರಹ್ಮಾ**ಃ— ಹೇಗಂದರೆ ? ಯಾವನಾದರೊಬ್ಬ ತರುಣ ಮನುಷ್ಯನು ಬೀದಿಯಲ್ಲಿ ಶೋಧಕ ಬುದ್ಧಿಯಿಂದ ಹೋಗುವದನ್ನು ಕಂಡರೆ, ಅವನು ಈಶ್ವರನಿರ್ಮಿತವಾದ ಸೃಷ್ಟಿಸೌಂದರ್ಯವನ್ನು ನೋಡುವನೋ ? ಅಥವಾ ಮಾನವನಿರ್ಮಿತ ಸೌಂದರ್ಯವನ್ನು ನೋಡುವನೋ ? ಎಂಬುದನ್ನು ನಾವು ಅವನ ದೃಷ್ಟಿಯಿಂದ ಕೂಡಲೇ ಕಂಡು ಹಿಡಿಯುತ್ತೇವೆ.

**ಇಂದ್ರಃ**-- ಈಶ್ವರ ನಿರ್ಮಿತ ಸೃಷ್ಟಿಸೌಂದರ್ಯವನ್ನು ಅವಲೋಕಿಸುವಾಗ್ಗೆ, ಮನುಷ್ಯನು ತನ್ನ ದೃಷ್ಟಿಯಲ್ಲಿ ಯಾವ ತರದ ಏಕಾಗ್ರತೆಯನ್ನು ಧರಿಸಬೇಕಾಗುವದೋ ? ಅಂತಹ ಏಕಾಗ್ರತೆಯು ಮಾನವ ನಿರ್ಮಿತ ಸೌಂದರ್ಯವನ್ನು ನೋಡುವದಕ್ಕೆ ಬೇಕಾಗುವದಿಲ್ಲ. ಹೀಗೆ ನಿಮ್ಮ ಅಭಿಪ್ರಾಯವೋ ?

**ಬ್ರಹ್ಮಾ**ಃ-- ಛೇ ! ಛೆ ! ತೀರಾ ಅದರ ವಿರುದ್ಧ.

**ವರುಣಃ**— ಅಂದರೆ ?

**ಬ್ರಹ್ಮಾ**ಃ— ಅಂದರೆ, ಮಾನವ ನಿರ್ಮಿತ ಸೌಂದರ್ಯವನ್ನು ನೋಡುವಾಗ್ಗೆ ತರುಣ ಜನರ ದೃಷ್ಟಿಯು, ಏಕಾಗ್ರವಾಗುವದು. ಆದರೆ, ಈಶ್ವರ ನಿರ್ಮಿತವಾದ ಸ್ತ್ರೀ ಈ ಪದಾರ್ಥವನ್ನು ನೋಡುವಾಗ್ಗೆ, ಆ ಏಕಾಗ್ರತೆಯು ಚಂಚಲವಾಗಿ, ಮೀಸೆಯನ್ನು ಹುರಿಮಾಡುವದೂ, ಧೋತ್ರದ ಅಂಚನ್ನು ಸವರಿಸಿಕೊಳ್ಳುವದೂ, ಕೈಯೊಳಗಿನ ಬೆತ್ತವನ್ನು ಚಂದವಾಗಿ ಹಿಡಿಯುವದೂ ಮುಂತಾದ ಪುರುಷಾರ್ಥಗಳಿಂದ ತನ್ನ ಸೌಂದರ್ಯವನ್ನು ವ್ಯಕ್ತಪಡಿಸುವ ವಿಷಯವಾಗಿ, ಇಮ್ಮಡಿಯಾಗುವದು; ಇದರ ಮೇಲಿನಿಂದ, ಈ ರಾಜೇಶ್ರೀಯವರು ಯಾರ ಉದ್ದೇಶದಲ್ಲಿ ನಿಮಗ್ನರಾಗಿರುವರೆಂಬದನ್ನು ಕಂಡು ಹಿಡಿದು, ನಾವು ಕೂಡಲೇ ಅವರ ಪರಿಚಯವನ್ನು ಮಾಡಿಕೊಳ್ಳುತ್ತೇವೆ.

**ಇಂದ್ರ**:— ಭಲೇ! ಭಲೇ! ಈ ಸರ್ವ ಬುದ್ಧಿಕೌಶಲ್ಯವನ್ನು ನೀವು ನಮ್ಮ ಕೊರಳಿನಲ್ಲಿಯೇ ಹಾಕಿದಿರಿ.

**ಬ್ರಹ್ಮ**:— ಇಷ್ಟೇನೆ? ಇನ್ನೂ ಎಷ್ಟೋ ಅಲಂಕಾರಗಳನ್ನು ನಿಮ್ಮ ಕೊರಳಿನಲ್ಲಿ ಹಾಕಬೇಕಾಗಿದೆ. ಒಳ್ಳೇದು, ನಿಮ್ಮ ಸೂಕ್ಷ್ಮವಾದ ಕಾರ್ಯ ವೇನು ಬೇಗನೇ ಹೇಳಿರಿ.

**ಇಂದ್ರ**.— ಈ ಊರಲ್ಲಿ ಮಹಾನಂದಿ ಎಂಬ ಒಬ್ಬ ಗಣಿಕಾ ಸ್ತ್ರೀ ಯು ಇರುವಳಂತೆ. ಅವಳ ಸಂಗಡ ಸ್ನೇಹವನ್ನು ಬೆಳಿಸಬೇಕೆಂದು ನನ್ನ ವಿಚಾರವದೆ.

**ಬ್ರಹ್ಮ**.:— ಮಹಾನಂದೆಯೋ? ಸದಾನಂದೆಯೋ?

**ಇಂದ್ರ**:— ಯಾರೋ ವರುಣಾ? ಅಲ್ಲ ಅಪತ್ತಿ ಶೇಡ್ಜಿಗಳೇ ಮಹಾ ನಂದೆಯಲ್ಲವೇ?

**ವರುಣ**:— ಹೌದು. ಮಹಾನಂದೆಯು. ಸದಾನಂದೆಯಲ್ಲಾ. ನಮಗೆ ಆ ದೇವಋಷಿಯು...... ಅಲ್ಲ ಅಲ್ಲ. ಆ ಗೋಸಾವಿಯು ಇದೇ ಹೆಸರನ್ನು ಹೇಳಿದನು.

**ಬ್ರಹ್ಮ**:- (ಆತ್ಮಗತ) ಇವನು ಅವನಿಗೆ ವರು ಎಂದನು. ಮತ್ತ್ತು ಅವನು ದೇವಋಷಿ ಹೇಳಿದನೆಂದು ಹೇಳಿದನು. ಇದರ ಮೇಲಿನಿಂದ ಇವರು ಯಾರಾದರೂ ಪೋಕ್ರಿ ಜನಗಳಾಗಿರಬಹುದು. ಮತ್ತು ಮಹಾನಂದೆಯ ಸ್ನೇಹ ಮಾಡುವದರಲ್ಲಿ ಏನಾದರೂ ಒಂದು ದುಷ್ಟ ಹೇತು ಇರಬಹುದು. ಅಂದಮೇಲೆ ನಾನಾದರೂ ಈ ಠಕ್ಕರಿಗೆ ಠಕ್ಕತನವನ್ನೇ ತೋರಿಸಬೇಕು. (ಪ್ರಕಾಶ) ಏಕೇ ಮಹಾನಂದೆಯೋ? ಸದಾನಂದೆಯೋ? ಸದಾನಂದೆಯು ಬೇಕಾದರೆ ಸ್ವಲ್ಪದರಲ್ಲಿಯೇ ಕೆಲಸವಾಗುವದು. ಆದರೆ ಮಹಾನಂದಯು ಬೇಕಾದರೆ ಮಾತ್ರ ಹೆಚ್ಚು ಖರ್ಚು ಮಾಡಬೇಕಾಗುವದು.

**ಇಂದ್ರ**:— ಅದರಲ್ಲೇನಿರುವದು? ಕುಬೇರನ ಭಾಂಡಾರವನ್ನೇ ತಂದು ಇರಿಸಿದರಾಯಿತು.

**ಬ್ರಹ್ಮಾ.:**— ಆದರೆ! ಅದಕ್ಕೋಸ್ಕರ ನೀವು ಮೊದಲು ಸ್ವರ್ಗಕ್ಕೆ ಹೋಗಬೇಕಾಗುವದು.

**ಇಂದ್ರಃ**— ಓಹೋ! ಹೋಗಿ ಬರಬಹುದು. ಆದರೆ ಮೊದಲು ಆ ಮಹಾನಂದೆಯು ಹೇಗಿದ್ದಾಳೆ, ಅದನ್ನು ನೋಡಬೇಕಾಗಿದೆ.

**ಬ್ರಹ್ಮಾ.:**—ಅದೆನ್ನೆಲ್ಲಾ ನಾನು ಮಾಡುತ್ತೇನೆ. ಮೊದಲು ನಿಮ್ಮ ಕೂಡ ನಾನು ಒಂದು ಕರಾರ ಮಾಡುವದದೆ. ಅದೇನಂದರೆ? ನೀವು ನನ್ನ ಶ್ರಮದ ಬಗ್ಗೆ ನಮ್ಮ ಗಂಧರ್ವ ಗಾಯನ ಶಾಲೆಗೆ ಏನಾದರೂ ಉಚಿತವನ್ನು ಕೊಡಬೇಕಾಗುವದು.

**ಇಂದ್ರಃ**— ನಿಮ್ಮ ಗಂಧರ್ವ ಗಾಯನ ಶಾಲೆಯೇ? ಅದಾವದು?

**ಬ್ರಹ್ಮಾ.:**— ನಮ್ಮ ಗಂಧರ್ವ ವಿದ್ಯಾಲಯದಲ್ಲಿ ಅಭ್ಯಾಸಮಾಡಿದ ಮನುಷ್ಯನು ಅಪಶ್ರುತಿ ತಾಳಗೆಟ್ಟು ಹಾಡಿದಾಗ್ಯೂ ಅವನಿಗೆ ಗಂಧರ್ವನೆಂಬ ಪದವಿಯೇ ದೊರೆಯುವದು. ಅಂಥಾ ನಮ್ಮ ಗಂಧರ್ವ ವಿದ್ಯಾಲಯ.

**ಇಂದ್ರಃ**— ಭಲೇ! ಭಲೇ! ಇಂಥಾ ಉಚ್ಚ ಪ್ರತಿಯ ಶೀಕ್ಷಣವನ್ನು ಯಾರು ಕೊಡುವರು?

**ಬ್ರಹ್ಮಾ.:**— ಯಾರಂದರೆ? ನಾನು. ನೀವು ನನ್ನನ್ನು ಯಾರೆಂದು ತಿಳಿದಿರುವಿರಿ?

೧೦- ರಾಗ ಪಾರ್ಶಿ ಚಾಲ ತಾಳ ದಾದರಾ.

**ಸರಿಯನಗಾವ ಗುಣಿಯು। ಪರಮ ಸುಖಿಯು ಸಕಲ**
**ಭುವನದೆ ॥**
**ಗಾನ ನರ್ತನವನು ಮಾಡಿ ಭಾವವನ್ನು ತೋರ್ಪೆ ॥**
**ಸರಿಗ। ರಿಗಮ। ಗಮಪ। ಮಪಧ। ಪಧನಿ। ಧನಿಸಾ ॥**

**ವರುಣಃ**— ಸಾಕು ಸಾಕು. ನೀವು ಕೇವಲ ಗುಣಜ್ಞರೇ ಇರುವಿರಿ. ನಮಗೆ ನಿಮ್ಮ ಯೋಗ್ಯತೆಯು ಸಂಪೂರ್ಣ ತಿಳಿದಂತಾಯಿತು.

ಬ್ರಹ್ಮ:— ಶಾರೀರಕ ಮತ್ತು ಮಾನಸಿಕ ಈ ಎರಡು ವಿಷಯದಲ್ಲಿ ಯಾವ ಶ್ರಮವನ್ನೂ ಮಾಡದೇ ಯಥೇಚ್ಛವಾಗಿ ಸುಖೋಪಭೋಗದಲ್ಲಿ ತಮ್ಮ ಆಯುಷ್ಯ ಕ್ರಮವನ್ನು ನಡಿಸತಕ್ಕವರು ಈ ಜಗತ್ತಿನಲ್ಲಿ ಮೂವರಿರುವರು. ಅವರೊಳಗ ನಾನೊಬ್ಬನು. ನಾನು ಸರ್ವಗುಣಸಂಪನ್ನನೂ, ಸರ್ವಾಂಗ ಸುಂದರನೂ ಇದ್ದೇನೆ. ನನ್ನಂತಹ ಸತ್ಪಾತ್ರ ಮನುಷ್ಯನಿಗೆ ನೀವು ಸಹಾಯ ಮಾಡುತ್ತೇನೆಂದು ಅಭಯ ವಚನ ಕೊಟ್ಟರೆ ನಾನು ನಿಮ್ಮ ಕಾರ್ಯವನ್ನು ಮಾಡುವೆನು.

ಇಂದ್ರ:— ಓಹೋ ! ಒಪ್ಪಿರುವೆವು. ಇದೋ ಹಿಡಿಯಿರಿ ವಚನವನ್ನು.

( ನಾರದ, ತುಂಬುರ ವೇಷಾಂತರದಿಂದ ಪ್ರವೇಶ. )

**ನಾರದ:**— ಹಾ. ಹಾ. ಸುಮ್ಮನಿರಮ್ಮಾ ಅಳಬೇಡಾ. ಇದೋ ನೋಡು ಪಟ್ಟಣದ ರಾಜಮಾರ್ಗವು ಸಮೀಪಿಸಿತು. ಇನ್ನು ಮೇಲೆ ಎಲ್ಲ್ಯಾದರೂ ಸ್ಥಳ ದೊರತೀತು.

**ಬ್ರಹ್ಮ:**— ಏಕಪ್ಪಾ ? ನೀವು ಯಾರು ?

**ನಾರದ:**— ಮಹರಾಜ ! ನಾವು ದರಿದ್ರರಾದ ಅಕ್ಕತಮ್ಮಂದಿರು.

**ಇಂದ್ರ:**— ನಿಮ್ಮ ಹೆಸರೇನು ?

**ನಾರದ:**— ನನ್ನ ಹೆಸರು ನಾರ್‍ಯಾ. ಇವಳ ಹೆಸರು ತುಂಬಾ.

**ಇಂದ್ರ:**— ಏನು ಚಮತ್ಕಾರವಾದ ಹೆಸರುಗಳು. ಒಳ್ಳೇದು ನಿಮ್ಮ ಸ್ಥಳವ್ಯಾವದು ?

**ನಾರದ:**— ನಾವು ಸಾಗರದವರು.

**ಬ್ರಹ್ಮ:**— ಸಾಗರದವರೇ ? ಇಷ್ಟು ದೂರ ಇಬ್ಬರೇ ಬಂದಿರುವಿರಾ ? ಒಳ್ಳೇದು ನಿಮ್ಮ ತಾಯಿತಂದೆಗಳಲ್ಲೆರುವರು ?

**ನಾರದ:**— ಸ್ವರ್ಗದಲ್ಲಿ.

**ಇಂದ್ರ**:-- ಹಾ ! ಹಾ ! ಇಂಥಾ ಚಿಕ್ಕಂದಿನಲ್ಲಿ ಪರದೇಶಿಗಳಾ ದಿರಾ ? ದುರ್ದೈವ !

**ಬ್ರಹ್ಮಾ**:— ಅವರ ದುರ್ದೈವ. ನಮ್ಮ ಸುದೈವ. ಹುಡು ಗಿಯು ನೋಡಲಿಕ್ಕೆ ಒಳ್ಳೇ ಸೊಗಸಾಗಿರುವಳು. ಎಂಥಾ ಶ್ಲೋಕದಾರ ನಾಯಕ ಸಾನಿಯಾಗುವಳಲ್ಲಾ ವಾಹವ್ವಾರೆವ್ವಾ. (ಪ್ರಕಾಶ) ನಿಮ್ಮ ತಂದೆ ತಾಯಿಗಳು ಸ್ವರ್ಗಕ್ಕೆ ಹೋಗಿ ಎಷ್ಟು ದಿವಸಗಳಾದವು ?

**ನಾರದ**:— ನಮಗೇನೂ ತಿಳಿಯದು. ಜನಗಳು ಅನ್ನುತ್ತಾರೆ. ಬಹಳ ದಿವಸಗಳಿಂದ ಅವರು ಸ್ವರ್ಗಸ್ಥರೇ ಆಗಿರುವರಂತೆ.

**ವರುಣ**:— ಏನಯ್ಯಾ ನಿಮ್ಮ ಉಭಯುತರ ತಂದೆತಾಯಿಗಳು ಒಬ್ಬರೇ ಏನು ? ಅಂದರೆ ನೀವು ಕೇವಲ ಒಡಹುಟ್ಟಿದವರೇನು ?

**ನಾರದ**:— ನಾವು ಅಕ್ಕತಮ್ಮಂದಿರಿರುವದೇನೋ ನಿಜ. ಆದರೆ ನಮ್ಮ ತಂದೆತಾಯಿಗಳು ಮಾತ್ರ ಒಬ್ಬರೇ ಅಲ್ಲ.

**ಬ್ರಹ್ಮಾ**:-- ತಂದೆತಾಯಿಗಳು ಒಬ್ಬರೇ ಅಲ್ಲದ ಮೇಲೆ ನೀವು ಅಕ್ಕ ತಮ್ಮಂದಿರು ಹೇಗೆ ?

**ನಾರದ**:— ತಾಯಿತಂದೆಗಳು ನಮ್ಮನ್ನು ಬಿಟ್ಟಂದಿನಿಂದ ನಾವು ಉಭಯುತರು.

**ಬ್ರಹ್ಮಾ**:— ಎಂಥಾ ಹುಚ್ಚನಿವನು ? ನೀವು ತಂದೆತಾಯಿಗಳನ್ನು ಅಗಲಿದಿರೋ ? ಅಥವಾ ತಂದೆತಾಯಿಗಳು ನಿಮ್ಮನ್ನು ಬಿಟ್ಟು ಹೋದರೋ?

**ನಾರದ**:— ಯಾರು ಯಾರನ್ನು ಬಿಟ್ಟು ಹೋದರೂ ಒಂದೇ. ಅಂದಿನಿಂದ ನಾವೀರ್ವರು ಅಕ್ಕತಮ್ಮಂದಿರೆಂದು ತಿಳಿದಿದ್ದೇವೆ

**ಬ್ರಹ್ಮಾ**:— ಹಾಗೆ ತಿಳಕೊಳ್ಳುವದರಿಂದ ಎಲ್ಯಾದರೂ ಅಕ್ಕ ತಮ್ಮಂದಿರಾಗಬಹುದೋ? ನನ್ನನ್ನು ಸಹಾ ಇಲ್ಲಿಯ ಸರ್ವನಾಯಕಸಾನಿ ಯರು ಅಣ್ಣನೆಂದು ಕರೆಯುವರು. ಅಂದರೆ ಅವರೆಲ್ಲಾ ಅಕ್ಕತಂಗಿಯ ರಾಗುವರೇ ? ಒಳ್ಳೇದು ನೀವು ಈ ಗ್ರಾಮಕ್ಕೆ ಬಂದ ಕಾರಣವೇನು ?

**ನಾರದಃ**— ನಿರ್ವಾಹಕರ್ತ್ಯೋಸ್ಕರ.

**ಬ್ರಹ್ಮಃ**— ಈ ಹುಡುಗಿಯ ನಿರ್ವಾಹದ ಬಗ್ಗೆ ನಾನು ಜವಾಬ್ದಾರಿ ವಹಿಸಿಕೊಳ್ಳುತ್ತೇನೆ. ನೀನು ಎರಡನೇಕಡೆ ಮತ್ತೆಲ್ಲಿಯಾದರೂ ನೋಡಿಕೋ. ಬಾ ಎಲ್ಲೆ ಹುಡುಗಿಯೇ ನನ್ನ ಸಮೀಪದಲ್ಲಿ ಬಂದು ನಿಲ್ಲು.

**ನಾರದ:**— ಅಮ್ಮಾ ತುಂಬೇ ಹೋಗಬೇಡಮ್ಮಾ. ನಾವು ಒಬ್ಬರಿಗೊಬ್ಬರು ಬಿಟ್ಟಿರಲಾರೆವು.

**ಇಂದ್ರಃ**— ಒಳ್ಳೇದು ನಿನ್ನನ್ನು ನಾನು ರಕ್ಷಿಸುತ್ತೇನೆ. ಇವರು ಆ ಹುಡುಗಿಯನ್ನು ರಕ್ಷಿಸುತ್ತೇವೆಂದು ಹೇಳುತ್ತಾರೆ. ಅಂದ ಮೇಲೆಯಾದರೂ ಆಯಿತೋ ?

**ನಾರದಃ**— ನಮ್ಮ ಅಕ್ಕನನ್ನು ಸಂರಕ್ಷಿಸಲಿಕ್ಕೆ ಯಾವಳಾದರೊಬ ಸ್ತ್ರೀಯೇ ಬೇಕು. ಅವಳು ಪರಪುರುಷರ ಹತ್ತರ ಎಂದೂ ಇರಲಾರಳು

**ಬ್ರಹ್ಮಾ:**—ನಿಮ್ಮ ಅಕ್ಕನನ್ನು ನಮ್ಮ ಅಕ್ಕನ ಹತ್ತರ ಇಡುತ್ತೇನೆ. ಮತ್ತು ನೀನು ಇವರ ಹತ್ತರ ಇರು.

**ನಾರದಃ**— ಅಂದರೆ ಇವರು ಯಾವಾಗಲೂ ಇರುವದೆಲ್ಲಿ ?

**ವರುಣಃ**— ಇವರ ಅಕ್ಕನ ಹತ್ತರ.

**ನಾರದಃ**— ಅಂದರೆ ನಾವೆಲ್ಲರೂ ಇವರ ಅಕ್ಕನ ಹತ್ತರ ಇರಬೇಕೆಂದಂತಾಯಿತು. ಬಹಳೇ ಉತ್ತಮ. ನಾವು ಮಾಡತಕ್ಕ ಕೆಲಸವೇನು ?

**ಬ್ರಹ್ಮಾಃ**— ಇವಳು ಬೆಳಿಗ್ಗೆ ಎದ್ದು ನಮ್ಮ ಮನೆಯ ಕೆಲಸ ಮಾಡತಕ್ಕದ್ದು. ಸಾಯಂಕಾಲಕ್ಕೆ ನಮ್ಮ ಗಾಯನ ಶಾಲೆಯಲ್ಲಿ ಗಾಯನ ನರ್ತನವನ್ನು ಕಲಿಯತಕ್ಕದ್ದು. ಮತ್ತು ರಾತ್ರಿಯಲ್ಲಿ ನಮ್ಮ ಮನೆಗೆ ಬಂದು ಹೋಗುವವರಿಗೆ ಎಲೆ ಯನ್ನು ಮಡಚಿಕೊಡತಕ್ಕದ್ದು.

**ನಾರದಃ**— ಒಳ್ಳೇದು ನಾನೇನು ಮಾಡಬೇಕು.

ಇಂದ್ರ.— ನೀನು ನನ್ನ ಸೇವಾವೃತ್ತಿಯಲ್ಲಿರಬೇಕು. ನಡೆ.

**ನಾರದ**:— ತುಂಬುರಸ್ವಾಮಿ ಬಹಳ ಜೋಕೆ. ಇನ್ನು ಮೇಲೆ ಈ ಮೃತ್ಯುಲೋಕದ ಪೋಕ್ರಿ ಜನಗಳ ಸಹವಾಸವು.

**ತುಂಬುರಃ**— ಸ್ವಾಮಿ! ಒಮ್ಮೆ ತಂದು ಹಾಕಿದಿರಿ. ಮುಂದೆ ಆದದ್ದು ಆಗಲಿ.

**ನಾರದಃ**—

೧೧ ರಾಗ ಸಾರಂಗ, ತಾಳ ಧೂಮಾಳಿ.

**ಆದರುಕೇಳ್ ಮುನಿಗಳ್ । ಪರಿಜನ ॥ ವಿರತಿಯ ತೊಲಗಿ**
**ಪರಿಜನರಾಗಿ ಸುರಕಾರ್ಯವ ಮಾಳ್ಪರ್ ॥೧॥**

## ಪ್ರವೇಶ ೬,

---

### ವಿಶ್ವಮೋಹಿನಿಯ ಮಹಾಲ.

(ಸರ್ವನಾಯಕಿಯರು ಗಾಯನ ಮಾಡುತ್ತಿರುವರು. ಬ್ರಹ್ಮಾನಂದ, ಇಂದ್ರ, ನಾರದ, ವರುಣ, ತುಂಬುರ ಇವರ ಪ್ರವೇಶ. )

ಬ್ರಹ್ಮಾ.:— ಪುರಂಧರ ಶೇಡ್ಜಿಯವರೇ ಇದೋ ನೋಡಿದಿರಾ! ನಮ್ಮ ನಂದಿಗ್ರಾಮದ ಸರ್ವವೈಭವವು ಒಂದೇ ಸ್ಥಳದಲ್ಲಿ ಏಕತ್ರ ವಾಗಿದೆ.

ಇಂದ್ರಃ— ನಾವು ನಮ್ಮ ಸರ್ವವೈಭವವನ್ನು ತಮಗೆ ಅರ್ಪಿಸಲಿಕ್ಕೆ ಸಿದ್ಧರಾಗಿರುತ್ತೇವೆ. ಆದರೆ, ಈ ನಿಮ್ಮ ವೈಭವವನ್ನು ನಮ್ಮ ಉಡಿಯಲ್ಲಿ ಹಾಕಿರಿ ಅಂದರಾಯಿತು.

ಬ್ರಹ್ಮಾ.:— ಸ್ವಲ್ಪ ತಡೆಯಿರಿ. ಸಾವಧಾನದಿಂದಾ ಸರ್ವವ್ಯವಸ್ಥೆಯನ್ನು ಮಾಡುತ್ತೇನೆ. ( ವಿಶ್ವಮೋಹಿನಿಯನ್ನು ಕರೆ) ಅಮ್ಮಾ ಅಮ್ಮಾ. ಇದು

ನೋಡಿದಿಯಾ ನಮ್ಮ ಮಹಾನಂದೆಯ ಗೋಸ್ಕರ ಒಳ್ಳೆ ಧನಾಢ್ಯರಾದ ಯಜಮಾನರನ್ನು ತಂದಿರುವೆನು.

**ವಿಶ್ವ.:**— ಏನು? ಮಹಾನಂದೆಯ ಗೋಸ್ಕರ ವಾಗಿಯೇ?

**ಬ್ರಹ್ಮ:**— ಹೌದು ನಿನ್ನಗೋಸ್ಕರವಲ್ಲಾ. ಮತ್ತು ಅವರು ಬೇಡಿದಷ್ಟು ಧನವನ್ನು ಕೊಡುವದಕ್ಕೆ ಸಿದ್ಧರಾಗಿದ್ದಾರೆ.

**ವಿಶ್ವ:**— ಅವರು ಕೊಡಬಹುದು ಆದರೆ ನಮ್ಮ ಹುಡಿಗಿಯ ಹಣೆಯಲ್ಲಿ ಅವನ್ನು ದೊರಕಿಸುವ ಯೋಗವೇ ಇಲ್ಲವಲ್ಲ. ನನಗೆ ಯಜಮಾನರೇ ಬೇಕಾಗಿಲ್ಲವೆಂದು ಸ್ಪಷ್ಟವಾಗಿ ಹೇಳುತ್ತಿರುವಳು.

**ಬ್ರಹ್ಮ:**—ಉಪದೇಶದ ನಾಲ್ಕು ಮಾತುಗಳನ್ನು ಹೇಳಿ ನೋಡಬೇಕು. ಇಂತಹ ಅಪೂರ್ವ ವಿಟಪುರುಷರು ದೊರೆತ ಸಂಧಿಯನ್ನು ವ್ಯರ್ಥವಾಗಿ ಕಳೆದುಕೊಳ್ಳಬೇಕೇನು ?

**ವಿಶ್ವ.:**— ಬೇಕಾದಷ್ಟು ಹೇಳಿ ನೋಡಿದ್ದಾಯಿತು. ಅದಕ್ಕೆ ಹೂ ಇಲ್ಲಿ. ಉಪ್ಪಿನಕಾಯಿ ಇಲ್ಲ. ಅವಳು ಏನು ಹೇಳಿದರೂ ಕೇಳುವಂತೆ ಇಲ್ಲ. ಬ್ರಹ್ಮಾನಂದನೇ ಇನ್ನು ಮೇಲೆ ನೀನೇ ಏನಾದರೂ ಉಪಾಯವನ್ನು ಯೋಚಿಸು.

**ಬ್ರಹ್ಮ:**— ಒಳ್ಳೇದು ಇನ್ನು ಮೇಲೆ ಹೀಗೆ ಮಾಡು. ಮಹಾನಂದೆಯನ್ನು ಅಡಗಿಸಿಟ್ಟು ಅವಳ ಬದಲಾಗಿ ಸದಾನಂದೆಯನ್ನು ತೋರಿಸಿಬಿಡು. ಅವರೇನೂ ಇದುವರೆಗೂ ಮಹಾನಂದೆಯನ್ನು ಪ್ರತ್ಯಕ್ಷವಾಗಿ ನೋಡಲಿಲ್ಲ. ಇವಳೇ ಮಹಾನಂದೆ ಎಂದು ಹೇಳಿದರಾಯಿತು.

**ವಿಶ್ವ.:**— ಇದೆಲ್ಲ ನಿಜವು. ಆದರೆ ಇವರೆಲ್ಲರೂ ಅದಕ್ಕೆ ಸಮ್ಮತಿಸಬೇಕಲ್ಲಾ.

**ಬ್ರಹ್ಮಾ.:**— ಇವರೆಲ್ಲರಿಗೂ ಈಗಲೇ ಪ್ರಸಾದವನ್ನು ಕೊಟ್ಟು ಹೊರಗೆ ಹಾಕು. ಮತ್ತು ಮಹಾನಂದೆಯನ್ನು ತನ್ನ ನರ್ತನಶಾಲೆಯಲ್ಲಿ ಏಕಾಂತವಾಗಿರುವದಕ್ಕೆ ಹೇಳು. ಅದೋ ನೋಡು. ಅವಳ ಗೋಸ್ಕರ

ಹೊಸದಾಗಿ ಒಬ್ಬದಾಸಿಯನ್ನು ತಂದಿರುವೆನು. ಇವಳಿಗೂ ಅವಳಿಗೂ ಪರಿಚಯುವನ್ನು ಮಾಡಿಕೊಡು ( ತುಂಬುರನನ್ನು ಕರೆದು ) ಇತ್ತ ಬಾ. ಇವಳ ಜತೆಗೆ ಹೋಗು. ಮತ್ತು ಇವಳು ಹೇಳಿದ ಕೆಲಸವನ್ನು ಮಾಡು. ( ವಿಶ್ವಮೋಹಿನಿ ಮತ್ತು ತುಂಬುರ ಹೋಗುವರು. )

**ಇಂದ್ರ:**— ಅಪತ್ತಿಶಿಡ್ಡಿಗಳೇ! ಇಲ್ಲಿ ಕೂಡಿದ ನಾಯುಕಸಾನಿಯರಲ್ಲಿ ಮಹಾನಂದೆಯು ಯಾರಾಗಿರಬಹುದು.

**ವರುಣ:**— ಎಲ್ಲರಿಗಿಂತಲೂ ಹೆಚ್ಚು ಸೌಂದರ್ಯವತಿಯಾಗಿರುವವಳೇ ಮಹಾನಂದೆಯು.

**ನಾರದ:** — ಮಹಾಸ್ವಾಮಿ ! ನಾನು ನೋಡುತ್ತೇನೆ. ( ನೋಡಿ ) ಆ ಭರ್ಜರೀ ಪೀತಾಂಬರವನ್ನುಟ್ಟುಕೊಂಡು ಇರುವವಳೇ ಮಹಾನಂದಿಯಾಗಿರಬಹುದು. ಅದೋ ನೋಡಿರಿ ಅವಳು ಬೆಳ್ಳಿಸಂಪುಷ್ಟದಲ್ಲಿ ಶಾಲಿಗ್ರಾಮವನ್ನು ಇಟ್ಟಂತೆ ಕಾಣುತ್ತಿರುವಳು.

**ಇಂದ್ರ:**— ಭರ್ಜರೀ ಪೀತಾಂಬರವನ್ನುಟ್ಟುಕೊಂಡ- ಮಾತ್ರಕ್ಕೆ ಅವಳು ಅಧಿಕ ಸುಂದರಿಯಾಗುವದಿಲ್ಲ. ಆದೋ ನೋಡು ಹರಿಣದಂತೆ ನೇತ್ರ; ಸಂಪಿಗೆ ಮೊಗ್ಗೆಯುಂತೆ ನಾಸಿಕವಿದ್ದು ಎಲ್ಲರ ಮಧ್ಯದಲ್ಲಿ ಕುಳಿತವಳೇ ಮಹಾನಂದೆಯಾಗಿರಬಹುದು.

**ನಾರದ:**—ಮಹಾಸ್ವಾಮೀ ! ಸುಂದರವಾದ ನೇತ್ರ, ಮತ್ತು ಸಾಧಾರಣವಾದ ನೇತ್ರ. ಸರಳವಾದ ನಾಸಿಕ ಮತ್ತು ಚಪ್ಪಟೆಯಾದ ನಾಸಿಕ, ಇವದೊಳಗಿನ ಅಧಿಕವಾದ ಸೌಂದರ್ಯವನ್ನು ಹೇಗೆ ಕಂಡು ಹಿಡಿಯಬೇಕು?

**ಇಂದ್ರ:**— ಮೂರ್ಖಾ. ಸೌಂದರ್ಯವನ್ನು ಸುಂದರವಾದ ನೇತ್ರ, ಮತ್ತು ಸರಳವಾದ ನಾಸಿಕ, ಇವುಗಳಿಂದಲೇ ಕಂಡು ಹಿಡಿಯಬೇಕಾಗುವದು.

**ನಾರದ:**— ನಾನು ಅನ್ನುವದೇನಂದರೆ! ಮಡಿಕೆಯೊಳಗಿನ ನೀರು

ಹೂಜಿಯೊಳಗಿನ ನೀರಿಗಿಂತಲೂ ಸ್ವಲ್ಪ ಕಡಿಮೆ ಸೀಯಾಗಿರುವದೇನು ?

**ಇಂದ್ರ**:— ನಾರ್‍ಯಾ ನೀನು ತೀರಾ ಮೂರ್ಖನಿರುತ್ತೀ.

**ನಾರದ**:— ಅಂತೇ ತಮ್ಮ ಆಶ್ರಿತನಾಗಿರುವೆನು.

**ಇಂದ್ರ**:— ಅಂದರೆ ನನ್ನ ಸಹವಾಸದಿಂದ ಬುದ್ಧಿವಂತನಾಗುವದಕ್ಕೋ ?

**ನಾರದ**:— ಅಥವಾ ನೀವೇ ನನ್ನ ಸಹವಾಸದಿಂದ ಬುದ್ಧಿವಂತರಾಗಬಹುದು.

**ವಿಶ್ವ**:— ಬಾಲಕಿಯರೇ ! ಯಾರೋ ಹೊರಗೆ ದೂರದೇಶದಿಂದ ಧನವಂತರಾದ ಸದ್ಗೃಹಸ್ಥರು ಬಂದಿರುವರು. ಆದ್ದರಿಂದ, ಈ ಸಮಾರಂಭವನ್ನು ಬೇಗನೇ ಮುಗಿಸಿರಿ

**ರಂಭಾ**:— ಅಂದಮೇಲೆ ಅವರಿಗೆ ಒಳಗೆ ಬರುವದಕ್ಕೆ ನಮ್ಮಿಂದ ಏನೂ ತೊಂದರೆಯಾಗಲಾರದು.

**ಬ್ರಹ್ಮ**:— ಆದರೆ ಅವರು ಕೇವಲ ಗರತಿಪುರುಷರಂತೆ. ಅವರಿಗೆ ನಿಮ್ಮ ಸಂಸರ್ಗವು ಬೇಡಾಗಿರಬಹುದು.

**ಮೇನಕೆ**:— ಗರತಿಪುರುಷರಾದ ಮೇಲೆ ನಾಯಕಸಾನಿಯರ ಮನೆಗೆ ಏತಕ್ಕೆ ಬಂದರು ಮಣ್ಣು ಮುಕುವದಕ್ಕೆ.

**ವಿಶ್ವ**:— ಒಳ್ಳೇದು ನೀವೆಲ್ಲರೂ ಮಹಾನಂದೆಗೆ ಚನ್ನಾಗಿಆ ಶಿರ್ವಾದ ಮಾಡಿ, ಈ ಸಮಾರಂಭವನ್ನು ಬೇಗನೇ ಮುಗಿಸಿ ನೋಡೋಣ.

**ಬ್ರಹ್ಮಾ**:— ಶೇಡ್ಜಿಗಳೇ ಬನ್ನಿರಿ. ಈ ಗಾದಿಯ ಮೇಲೆ ಕುಳಿತುಕೊಳ್ಳಿರಿ. ಈ ತಾಂಬೂಲವನ್ನು ಸ್ವೀಕರಿಸಿರಿ.

**ನಾರದ**:— ಧಣಿಯರೇ ನಾನೆಲ್ಲಿ ಕುಳಿತುಕೊಳ್ಳಬೇಕು ?

**ವಿಶ್ವ**:— ಇವನಾರು ? ಆ ಶೇಡ್ಜಿಗಳ ಸೇವಕನಾಗಿರಬಹುದು. **ತಮ್ಮಾ ನಿನ್ನ ಹೆಸರೇನು ?**

**ನಾರದ:**— ನನ್ನ ಹೆಸರು ನಾರ್ಯಾ. ನಾನು ಎಲ್ಲಿ ಕೂಡಬೇಕು?

**ಬ್ರಹ್ಮ:**— ಹೊರಗೆ ಕಟ್ಟೆಯಮೇಲೆ ಕುಳಿತುಕೋ ಹೋಗು?

**ನಾರದ:**— ಧಣಿಯರೇ ನಾನು ಹೋಗಲೇ ?

**ಇಂದ್ರ:**— ಹೋಗು ಹೊರಗೆ ಕುಳಿತುಕೋ. ನಾನು ಕರವಾಗ್ಗೆ ಬಾ.

**ನಾರದ:**—(ಬ್ರಹ್ಮನಾದನ ಕಡೆಗೆ) ಏನು ಸ್ವಾಮೀ! ಸಭ್ಯಮಧ್ಯಸ್ಥಗಾರರೇ! ನಮ್ಮ ಧಣಿಯರಿಗೆ ಮಹಾನಂದೆಯು ಬೇಕಾಗಿರುವಳು. ಆದರೆ ನೀವು ಅವರಿಗೆ ಸದಾನಂದೆಯನ್ನು ಕೊಡುತ್ತಿರುವಿರಿ. ಸಾಗಲಿ ನಿಮ್ಮ ತಂತ್ರವು. ನಾನೇನು ಈ ರಹಸ್ಯವನ್ನು ನಮ್ಮ ಧಣಿಯರಿಗೆ ಹೇಳುವದಿಲ್ಲ.

**ಬ್ರಹ್ಮ:**— ಹುಡುಗನು ಎಂಥಾ ಧೂರ್ತನಾಗಿರುವನ. ಇರಲಿ; ಅವನ ಸಮಧಾನವನ್ನು ಆ ಮೇಲೆ ಮಾಡೋಣ.

**ವಿಷ್ಣು:**— ಮಗಳೇ! ಬಂದವರಿಗೆ ಎಲೆಪಟ್ಟಿಯನ್ನು ಮಾಡಿಕೊಡು.

**ಬ್ರಹ್ಮ:**— ಪುರಂಧರ ಶೇಡ್ಜಿಗಳೇ; ಇವಳೇ ಮಹಾನಂದೆಯು. ನೀವಂತೂ ಇಲ್ಲೆ ಇರುವಿರಿ ಇನ್ನೇನು ? ನಮ್ಮ ಹಣವನ್ನು ಬೇಗನೇ ಕೊಟ್ಟು, ಬಿಡಿರಿ ?

**ಇಂದ್ರ:**— ಒಳ್ಳೇದು; ಅಪತ್ತಿಶೇಡ್ಜಿಗಳೇ! ಇವರ ಸಂಗಡ ಹೋಗಿ ಇವರು ಬೇಡಿದಷ್ಟು ಹಣವನ್ನು ಇವರ ಸ್ವಾಧೀನ ಪಡಿಸಿ. (ವರುಣನೊಡನೆ) ವರುಣನೇ! ಇನ್ನು ಮೇಲೆ ನೀನು ಮರಳಿ ಬರುವ ಪ್ರಯೋಜನವೇನೂ ಇಲ್ಲಾ. ಇವರ ಹಣವನ್ನು ಕೊಟ್ಟು, ಊರ ಹೊರಗೆ ಹೋಗಿ ನದಿಯಲ್ಲಿ ಪಂಚಭೂತಾತ್ಮಕವಾದ ದೇಹವನ್ನು ತ್ಯಾಗಮಾಡಿ, ಸ್ವರ್ಗಲೋಕಕ್ಕೆ ಹೋಗು. ನಾನು ಮಹಾನಂದೆಯನ್ನು ಕರೆದುಕೊಂಡು ನಿನ್ನ ಬೆನ್ನು ಹಿಂದಿನಿಂದ ಬಂದೆನೆಂದು ತಿಳಿ.

**ವರುಣ:**— ದೇವೇಂದ್ರಾ! ಇಷ್ಟು ಅಲ್ಪ ಶ್ರಮದಿಂದಲೇ ನನಗೆ

ಮಹಾನಂದೆಯು ಪ್ರಾಪ್ತವಾದ ಬಗ್ಗೆ ನನಗೆ ಸಂಶಯವೆನಿಸುತ್ತಿರುವದು. ನಾರದನು ಇವಳ ಪ್ರಶಂಶೆಯನ್ನು ಬಹಳವಾಗಿ ಮಾಡಿದ್ದಿಲ್ಲವೇ ?

ಇಂದ್ರಃ— ಎಲೋ ನಿಜವಾದ ಗುಣವಿಲ್ಲದೇ ಬರೇ ಪ್ರಶಂಶೆಯಿಂದಲೇ ಒಂದೊಂದು ವ್ಯಕ್ತಿಗೆ ಹೆಚ್ಚು ಮಹತ್ವ ಬರುವದು. ಆದರೆ, ಸ್ತ್ರೀಯನ್ನು ವಶಮಾಡಿಕೊಳ್ಳುವ ಚತುರತನವು ಆ ಸನ್ಯಾಸಿಗಳಿಗಿಂತಲೂ ಗ್ರಹಸ್ಥಾಶ್ರಮಿಗಳಿಗೆ ಹೆಚ್ಚು ವಿದಿತವಾಗಿರುವದು. ಇದು ಆ ನಾರದನಿಗೆ ಹೇಗೆ ತಿಳಿಯಬೇಕು. ಏನೂ ಸಂಶಯವಿಲ್ಲದೆ ನಿರ್ಬಾಧಿತನಾಗಿ ಹೊರಟುಹೋಗು.

( ಬ್ರಹ್ಮಾನಂದ ಮತ್ತು ವರುಣ ಹೋಗುವರು )

ವಿಶ್ವ :— ಶೇಡ್ಜಿಗಳೇ ನಾವು ಜಾತಿಯಲ್ಲಿ ನಾಯಕಸಾನಿಯರಿದ್ದರೂ ನಮ್ಮ ಮನೆತನದ ಪದ್ಧತಿಯು ಕೇವಲ ಗರತಿಯರಂತೆ ಇರುವದು.

ಇಂದ್ರಃ— ಅದನ್ನೇನು ನೀವು ನಮಗೆ ಹೇಳಬೇಕೇ ? ನಮಗೆ ತಿಳಿಯುವದಿಲ್ಲವೇ ?

ವಿಶ್ವ :— ಅದರಲ್ಲಿಯೂ ಈ ನನ್ನ ಮಗಳ ಗುಣವನ್ನು ಎಷ್ಟು ಬಣ್ಣಿಸಿದರೂ ತೀರದು, ಇವಳನ್ನು ನೋಡಿದ ಕೂಡಲೇ, ಇವಳ ಗೋಸ್ಕರ ಸ್ವರ್ಗದಲ್ಲಿರುವ ದೇವೇಂದ್ರನು ಕೂಡಾ ತನ್ನ ಹೆಂಡತಿಯನ್ನು ಬಿಟ್ಟು ಇಲ್ಲೇ ವಾಸಮಾಡಬಹುದು.

ಇಂದ್ರಃ – ( ಸ್ವಗತ ) ಅಂತೇ ನಾನಾದರೂ ನನ್ನ ಸರ್ವಸ್ವಕ್ಕೂ ತುಲಸೀ ಪತ್ರವನ್ನಿಟ್ಟು ಈ ಮಹಾನಂದೆಯ ಪ್ರಸಿದ್ಧಿಯನ್ನು ಕೇಳಿ, ಇಲ್ಲಿಯವರೆಗೆ ನಡೆಯುತ್ತಾ ಬಂದಿರುವೆನು.

ವಿಶ್ವಃ— ಮಗಳೇ ! ಶೇಡ್ಜಿಗಳು ಒಳ್ಳೇ ಸಭ್ಯಗೃಹಸ್ಥರಾಗಿ ತೋರುವರು. ತಾಂಬೂಲದಲ್ಲಿ ಸ್ವಲ್ಪ ಏಲಕ್ಕಿಯನ್ನು ಹಾಕು. ಅಂತೂ ತಾವು ಮಹಾನಂದಾ ಈ ಹೆಸರಿಗೆ ಬಹಳವಾಗಿ ಮೋಹಿಸಿರುವಿರಿ ?

ಇಂದ್ರಃ— ಛೀ. ಛೀ. ಈಗ ಪ್ರತ್ಯಕ್ಷವಾಗಿ ಸ್ವರೂಪವನ್ನು ನೋಡಿದ ಮೇಲೆ ಹೆಸರಿನ ಮಹತ್ವವೇನು ಉಳಿದಂತಾಯಿತು ?

ವಿಶ್ವ:— ತಾವು ಇವಳಿಗೋಸ್ಕರವಾಗಿ ತಮ್ಮ ಸರ್ವಸಂಪತ್ತಿಯನ್ನು ಅರ್ಪಿಸಿದಿರಲ್ಲವೇ ?

ಇಂದ್ರಃ— ಹೌದು. ಇವಳಿಗೋಸ್ಕರವಾಗಿಯೇ ಅರ್ಪಿಸಿದೆನು.

ವಿಶ್ವ.ಃ— ಮಗಳೇ ಅದರಲ್ಲಿ ಸ್ವಲ್ಪ ಜಾಜೀಕಾಯಿಯನ್ನು ಹಾಕು. ಇನ್ನು ಉಭಯ ಪಕ್ಷದವರಿಗೂ, ಯಾವ ವಿಧವಾದ ತೊಂದರೆ ಇಲ್ಲ ವೆಂದಂತಾಯಿತು.

ಇಂದ್ರ:— ಏನೂ ಇಲ್ಲ. ಏಕೆ ಬಹಳ ವಿಚಾರಿಸುತ್ತೀರಿ ?

ವಿಶ್ವ.ಃ— ಮತ್ತೇನೂ ಇಲ್ಲ. ನಮ್ಮ ವೇಶ್ಯಯರ ಮನೆತನವೆಂದರೆ ಕೇವಲ ಕಾಪಟ್ಯದ ಬಾಜಾರವೆಂದೇ ಯಾರೊಬ್ಬರು ತಿಳಿಯುವರು. ಅಂತೇ ಒಬ್ಬಳನ್ನು ತೋರಿಸುವದು ಮತ್ತೊಬ್ಬಳೊಡನೇ ಸಹವಾಸ.

ಇಂದ್ರ: — ಹೀಗೆ ಮಾಡತಕ್ಕವರು ಕೇವಲ ಮೂರ್ಖರೇ ಆಗಿರಬಹುದು.

ವಿಶ್ವ.ಃ— ಶೇಠ್ಜಿಗಳೇ ! ನಿಮಗೆ ಏನು ಹೇಳಲಿ. ಮೊನ್ನೆ ಆ ರಂಭಾ ಸಾನಿಯ ಮನೆಗೆ ಹೀಗೆ ಒಬ್ಬ ಸದ್ಗೃಹಸ್ಥರು ಬಂದಿದ್ದರು. ಅವರು ಅವಳ ಮನೆಯಲ್ಲಿರುವ ಒಕ್ಕಲಗಿತ್ತಿಗೆ ರಂಭಾಸಾನಿಯೆಂದು ಕರೆಯ ಹತ್ತಿದರಂತೆ. ಅವರಂತೆ ನೀವು ನನಗೆ ಮಹಾನಂದೆ ಎಂದು ಕರೆಯಹತ್ತಿದರೆ ?

ಇಂದ್ರಃ— ನಿಮಗೆ ನಾನು ಮಹಾನಂದೆ ಎಂದು ಕರೆಯುವೆನೇ ? ಛೀ. ಛೀ. ಸ್ವಪ್ನದಲ್ಲಿಕೂಡಾ ಆಗಲಾರದು.

ವಿಶ್ವ.— ಮಗಳೇ ! ನಮ್ಮ ಭಾಷಣದ ಮೇಲಿನಿಂದ ನೀನು ಎಲ್ಲ ವಿಷಯನ್ನು ತಿಳಿದುಕೊಂಡಿರಬಹುದು.

ಸದಾ ಃ - ಓಹೋ. ನಾನು ಮಹಾನಂದೆ ಎಂದು ಇವರ ಸಂಗಡ ನಡೆಯಬೇಕಲ್ಲವೇ ?

ವಿಶ್ವ.:— ನನ್ನ ಮಗಳು ಎಂಥಾ ಗುಣವಂತಿಯಾಗಿರುವಳು. ಜನರು ತಮ್ಮ ಸ್ವಂತ ಹೊಟ್ಟೆಯ ಮಕ್ಕಳಿಂದಲೇ ತಂದೆತಾಯಿಗಳಿಗೆ ಸುಖವಾಗುವದೆಂದು ಅನ್ನುತ್ತಾರೆ. ಆದರೆ ನಮ್ಮ ವೇಶ್ಯೆಯರ ದತ್ತಕ ಮಕ್ಕಳು, ಅವರಿಗಿಂತಲೂ ಸಾವಿರ ಪಾಲಿಗೆ ಬೇಕು. ಪಾಪ ! ಹೇಳಿದಂತೆ ಕೇಳುವಳು. ಮಗಳೇ ! ನಾನು ಕಲಿಸಿದಂತೆ ಇವರ ಸಂಗಡ ಮಾತನಾಡಬೇಕು.

ಸದಾ.:— ತೀರಾ ಅದರಂತೆ ಮಾತನಾಡುವೆನು. ಸ್ವಲ್ಪವಾದರೂ ತಪ್ಪುವದಿಲ್ಲ.

ವಿಶ್ವ.:— ಅವರಿಗೆ ಹೀಗೆ ಹೇಳು. ದಿನಾಲು ನನಗೆ ನಿಮ್ಮ ಸ್ವಪ್ನ ಬೀಳುತ್ತಿತ್ತು.

ಸದಾ.:— ಅದನ್ನಂತೂ ಮೊದಲೇ ಹೇಳುವೆನು.

ವಿಶ್ವ.:— ಮತ್ತು ಅವರಿಗೆ ನೀವು ಮನ್ಮಥನಂತೆ ಸುಸ್ವರೂಪಿಗಳೂ ಕುಬೇರನಂತೆ ಶ್ರೀಮಂತರೂ ಇರುವಿರಿ ಎನ್ನ ಬೇಕು.

ಸದಾ.:— ಹೌದು. ಅವರನ್ನು ನಾನು ಹೀಗೆ ವರ್ಣಿಸಿದರೆ ಅವರು ಕೂಡಾ ನನ್ನನ್ನು ಸುಂದರಿ ಎಂದು ಪ್ರೀತಿಸುವರು.

ವಿಶ್ವ.:— ಮತ್ತು ಅವರು ನಿನ್ನನ್ನು ಪ್ರೀತಿಯುಕ್ತ ಮಾತಗಳನ್ನಾಡುತ್ತಾ, ನಿನ್ನ ಕೈಹಿಡಿದು ತಮ್ಮ ಸಮೀಪಕ್ಕೆ ಕರೆಯುವರು.

ಸದಾ.:— ಆದರೆ ನಾನೇನು ಹಾಗೆ ಹೋಗತಕ್ಕವಳೇ ? ಏನಾದರೂ ಚಪಲತ್ವಮಾಡುತ್ತಾ, ಅಲ್ಲಿಯೇ ನಿಂತುಕೊಳ್ಳುವೆನು.

ವಿಶ್ವ.:— ಹಾ. ಹೀಗೆ ಮಾಡಬೇಕು. ಮತ್ತು ಅವರು ಬಹಳ ಆಗ್ರಹ ಮಾಡಹತ್ತಿದರೆ, ಅವರಿಗೆ ನಮ್ಮ ಮನೆಯಲ್ಲಿ ಹಾಗೆ ಅದೆ. ಹೀಗೆ ಅದೆ. ಅದು ಬೇಕು. ಇದು ಬೇಕು. ಹೀಗೆ ಏನಾದರೊಂದು ವಿಷಯದ ಬಗ್ಗೆ ನೆವ ತೆಗೆದು ಅವರಿಂದ ಏನಾದರೂ ವಚನವನ್ನು ತೆಗೆದುಕೊಳ್ಳಬೇಕು.

**ಸದಾ.**— ಅಂಥಾ ಸಂಧಿಯನ್ನು ಕಳೆದುಕೊಳ್ಳುವೆನೇ. ಅದನ್ನು ನಾನು ಎಂದಿಗೂ ಮರೆಯಲಾರೆನು.

**ವಿಶ್ವ.**— ನೀನು ಬೇಡಿದ ಪದಾರ್ಥಗಳನ್ನು ಅವರು ನಾಳೆ ಕೊಡುತ್ತೇನೆಂದು ಹೇಳಿದಕೂಡಲೇ, ಅವರ ಕಡೆಯಿಂದ ತಂದೆತಾಯಿಗಳ ಆಣೆ ಕ್ರಿಯೆಗಳನ್ನು ಮಾಡಿಸಿ ಕೊಳ್ಳಬೇಕು.

**ಸದಾ.:**— ಒಳ್ಳೇದು ಅವರು ನಿನ್ನ ಪ್ರೇಮವು ನನ್ನ ಮೇಲೆ ಇರುವದೇ ಎಂದು ಕೇಳಿದರೆ ಅದಕ್ಕೆ ನಾನು ಏನು ಹೇಳಬೇಕು.

**ವಿಶ್ವ.:**— ಛೀ. ಹುಚ್ಚಿ. ಅದಕ್ಕೆ ಇಷ್ಟೊಂದು ವಿಚಾರವೇಕೆ ? ಕೂಡಲೇ ನೀನು, ನಿಮ್ಮ ಕೊರಳಾಣೆ ಎಂದು ಆಣೆ ಇಟ್ಟುಕೊಂಡು, ನಿಮ್ಮ ಹೊರ್ತು ಈ ಜಗತ್ತಿನಲ್ಲಿಯ ಅನ್ಯ ಪುರುಷರು ನನಗೆ ಬಂಧುಸಮಾನರೆಂದು ಹೇಳಬೇಕು.

**ಸದಾ.:**— ಹೀಗೆ ಸುಳ್ಳು ಆಣೆಗಳನ್ನು ಮಾಡಿದರೆ ಪಾಪಕ್ಕೆ ಗುರಿಯಾಗಬೇಕಲ್ಲವೇ ?

**ವಿಶ್ವ.:**— ಇಕೋ. ನಿನಗೆ ಇನ್ನೊಂದು ವಿಷಯವನ್ನು ಹೇಳುವದಕ್ಕೆ ಮರೆತನು- ಯಾವಾಗಲೂ ಮಾತನಾಡುವಾಗ್ಗೆ ಸೀರೆಯ ಸೆರಗಿನ ಚುಂಗನ್ನು ಬಾಯಿಯಲ್ಲಿಟ್ಟುಕೊಂಡಿರಬೇಕು. ಅಂದರೆ ಎಷ್ಟು ಸುಳ್ಳು ಆಣೆಗಳನ್ನು ಮಾಡಿದರೂ ಅದರ ಪಾಪವು ತಟ್ಟುವದಿಲ್ಲ. ನಾನು ಹೋಗುತ್ತೇನೆ. ಬ್ರಹ್ಮಾನಂದನು ಹಣವನ್ನು ತಕ್ಕೊಂಡು ಬಂದನು. ಇಕೋ ! ಈ ಎಲೆ ಪಟ್ಟಿಯನ್ನು ತೆಗೆದುಕೊ. ಶೇಡ್ಜಿಗಳ ಮಂಚದ ಮೇಲೆ ಕೂಡುವಾಗ್ಗೆ ಅವರಿಗೆ ಕೊಡು.

( ಹೋಗುವಳು )

**ಇಂದ್ರ:**— ಹಾ. ವೃದ್ಧ ಜನರು ಹೊರಟು ಹೋದರು. ಇನ್ನೇನು ! ಸುಮ್ಮನೇ ನಾಚಿಕೊಂಡು ದೂರನಿಲ್ಲುವದೇಕೆ ? ಇಬ್ಬರೂ ಸೇರಿ ಈ ಮಂಚದ ಮೇಲೆ ಕುಳಿತುಕೊಳ್ಳೋಣ. ನಿಜವಾಗಿ ಈ ಸ್ತ್ರೀಯರ ಸ್ವಭಾ

ವವು ಹಟವುಳ್ಳದ್ದು. ನಾವು ನಿಮ್ಮ ಗೋಸ್ಕರ ನಾಲ್ಕು ದಿನದ ದಾರಿಯನ್ನು ನಡೆಯುತ್ತ ಬಂದೆವು. ಆದರೆ, ನೀವು ನಮ್ಮ ಗೋಸ್ಕರವಾಗಿ ನಾಲ್ಕು ಹೆಜ್ಜೆ ಮುಂದಕ್ಕೆ ಬಂದು ಕೂಡಬಾರದೇನು ?

**ಸದಾ**ಃ— ತಾವು ಮಹಾನಂದಿ ಈ ಹೆಸರಿಗೆ ಮೋಹಿಸಿ ಬಂದಿರುವಿರಿ. ನನ್ನ ಗೋಸ್ಕರವಲ್ಲ.

**ಇಂದ್ರ**ಃ— ಒಳ್ಳೇದು ! ತಮ್ಮ ಸ್ಥಳದಲ್ಲಿಯೇ ಕುಳಿತುಕೊಂಡು ಒಂದು ಸುಂದರವಾದ ಎಲೆ ಪಟ್ಟಿಯನ್ನು ಮಾಡಿಕೊಡೋಣವಾಗಲ, ನೋಡೋಣ.

**ನಾರದ**:— ಅಹಾ ! ಎಷ್ಟು ಸೊಗಸಾಗಿ ಕಳಿಕಟ್ಟಿರುವಮ.

೧೨. ರಾಗ—ಮಲ್ಹಾರ? ತಾಳ ತ್ರಿವಟ.

**ಪೊಸದಾದ ರಂಗದೊಳು ತಾ ಸುರಪನಮಿತ ದಂಗನಾಗಿ**
**ರುವಾ ॥ ಈ ರಂಗವನಾ ಭಂಗಗೊಳಿಸುವೆ । ಇಂಗಿತವನು**
**ನಾ ಪೇಳುತಲೆ ಜೀಯ್ಯಾ ॥೧॥**

**ಸದಾ**ಃ—( ಎಲೆಪಟ್ಟಿಯನ್ನು ಮಾಡುತ್ತಾ ) ನಾನು ಎಷ್ಟೋ ದಿವಸಗಳಿಂದ ಚಾತಕ ಪಕ್ಷಿಯಂತೆ, ತಮ್ಮ ಮಾರ್ಗನಿರೀಕ್ಷಣೆ ಮಾಡುತ್ತಾ ಇದ್ದೆನು.

**ಇಂದ್ರ**ಃ— ಏನು ಕೇವಲ ಚಾತಕ ಪಕ್ಷಿಯರತೆ ?

**ನಾರದ**ಃ— ಹೌದು ಚಾತಕ ಪಕ್ಷಿಯಂತೆ ಅಲ್ಲ. ಕೇವಲ ಗೃಧ್ರ ಪಕ್ಷಿಯಂತೆ.

**ಇಂದ್ರ**ಃ—ಒಳ್ಳೇದ, ನಿಮಗೆ ನನ್ನ ಹೆಸರು ಹೇಗೆ ಗೊತ್ತಾಯಿತು ?

**ನಾರದ**ಃ— ಇದು ವರೆಗೂ ಯಾರಿಗೆ ಗೊತ್ತಿರುವದು ?

**ಸದಾ**ಃ— ನಾವು ನಿಮ್ಮಂತೆ ಹೆಸರಿನ ಮೇಲೆ ಪ್ರೇಮ ಮಾಡುವದಿಲ್ಲ. ಮನುಷ್ಯರನ್ನು ನೋಡಿ ಮಾಡುತ್ತೇವೆ.

**ಇಂದ್ರ:**— ಪೂರ್ವದಲ್ಲಿ ನನ್ನನ್ನು ನೀವು ಎಂದಾದರೂ ನೋಡಿದ್ದಿರೇನು ?

**ನಾರದ:**— ಹೌದು. ಕಲ್ಪನಾ ಸೃಷ್ಟಿಯಲ್ಲಿ ನೋಡಿದ್ದರು.

**ಇಂದ್ರ:**— ನಾನಂತೂ ಈ ಊರಿಗೆ ಇಂದೇ ಹೊಸದಾಗಿ ಬಂದಿರುವೆನು.

**ಸದಾ:**— ಇರಬಹುದು. ಆದರೆ, ನಾನು ಮಾತ್ರ ಈಗ ಆರು ತಿಂಗಳಿನಿಂದ ನಿಮ್ಮ ಮಾರ್ಗನಿರೀಕ್ಷಣೆ ಮಾಡುತ್ತಾ ಇದ್ದೆನು.

**ಇಂದ್ರ:**— ಅಂದರೆ ? ಇದರ ಅರ್ಥವೇ ನನಗೆ ತಿಳಿಯುವದಿಲ್ಲ.

**ನಾರದ:**— ಅರ್ಥವೆಲ್ಲಾ ಅನರ್ಥವೇ ! ಅಂದಮೇಲೆ ತಿಳಿಯುವದು ಹೇಗೆ ?

**ಇಂದ್ರ:**— ನಿಮಗೆ ನನ್ನ ವಿಷಯದಲ್ಲಿ ಹೇಳಿದವರಾರು ?

**ಸದಾ:**— ನಮಗೆ ಯಾರೂ ಹೇಳುವದಕ್ಕೆ ಬೇಡಾ. ಸ್ವಪ್ನದಲ್ಲಿ ನಮಗೆ ಹೆಚ್ಚು ವಿಶ್ವಾಸ ವಿರುವದು.

**ಇಂದ್ರ:**—ಅಂದರೆ ? ತಮಗೆ ನನ್ನ ವಿಷಯದಲ್ಲಿ ಸ್ವಪ್ನವಾಯಿತೇ ಅದೇನು ?

**ಸದಾ:**— ಒಂದು ದಿವಸ ರಾತ್ರಿ ನಾನು ನಿತ್ಯನಿಯಮದಂತೆ, ರುಕ್ಮಿಣಿಸ್ವಯಂವರವನ್ನು ಓದಿದೆನು.

**ನಾರದ:**— ದಿನಾಲು ನಡೆಯುತ್ತಿರುವ ನೂತನ ಸ್ವಯಂವರನ್ನು ಬಿಟ್ಟು, ಆ ನಿರ್ಮಾಲ್ಯವಾದ ರುಕ್ಮಿಣಿ ಸ್ವಯಂವರವನ್ನು ಏಕೆ ಓದಿದಿರಿ?

**ಇಂದ್ರ:**— ಒಳ್ಳೇದು ಮುಂದೆ ?

**ಸದಾ:**— ಬೇಗನೇ ನಿದ್ರೆ ಹತ್ತಲಿಲ್ಲ. ಆದ್ದರಿಂದ ಉಷಾಸ್ವಪ್ನವನ್ನು ಓದುವದಕ್ಕೆ ಪ್ರಾರಂಭಿಸಿದೆನು. ಕೂಡಲೇ ನನಗೆ ಸ್ವಲ್ಪ ಜಂಪು

ಹತ್ತಿತು.

**ಇಂದ್ರ**:— ಮುಂದೇನಾಯಿತು ?

**ನಾರದ**:— ಮುಂದೇನು ? ಆ ಉಷಾ ಸ್ವಪ್ನವು ಇವರಿಗೆ ಬಿತ್ತು.

**ಸದಾ**:— ನನಗೆ ಮೊದಲು ಭಾಸವಾದದ್ದೇನಂದರೆ, ರುಕ್ಮಿಣಿಯು ಶ್ರೀಕೃಷ್ಣನ ಪ್ರಾಪ್ತಿಗೋಸ್ಕರ ಹೇಗೆ ಸುದೇವಭಟ್ಟನನ್ನು ಪ್ರಾರ್ಥಿಸಿದಳೋ ? ಅದರಂತೆ ನಾನು ಒಬ್ಬ ಪ್ರಿಯಕರನ ಪ್ರಾಪ್ತಿಗೋಸ್ಕರ ಒಬ್ಬ ಮುನಿಕುಮಾರನನ್ನು ಪ್ರಾರ್ಥಿಸುತ್ತಿದ್ದೆನು.

**ನಾರದ**:— ಸರಿ. ಇವಳು ರುಕ್ಮಿಣಿ. ಅವರು ಶ್ರೀಕೃಷ್ಣ. ನಾವು ಸುದೇವ ಭಟ್ಟರಿಂದಂತಾಯಿತು.

**ಇಂದ್ರ**:— ಭಲೇ. ಮುಂದೆ.

**ಸದಾ**:— ಆ ಮುನಿಕುಮಾರನು ನನಗೆ ಆಶ್ವಾಸನ ಕೊಟ್ಟು, ನನ್ನನ್ನು ಇಂದ್ರಲೋಕದಂತಿರುವ ಒಂದು ದೊಡ್ಡ ಪಟ್ಟಣದ ರಾಜಸಭೆಯಲ್ಲಿ ಕರಕೊಂಡು ಹೋಗಿ, ಆ ರಾಜನ ಮುಂದೆ ನಿಲ್ಲಿಸಿದನು. ಮತ್ತು ಇದೋ ನೋಡು; ಇವನೇ ನಿನ್ನ ಪ್ರಿಯಕರನೆಂದು ತೋರಿಸಿದನು.

**ನಾರದ**:— ಇವರೇ ಆ ರಾಜೇಶ್ರೀಗಳು.

**ಇಂದ್ರ**:— ಆ ರಾಜನು ಯಾರಾಗಿರಬಹುದು ?

**ಸದಾ**:— ಎರಡನೇಯವರು ಯಾರು ? ತಾವೇ ! ಮತ್ತು ಅಂದಿನಿಂದ ನಿಮ್ಮ ವಿಷಯವಾಗಿ ನನಗೆ ಹುಚ್ಚು ಹಿಡಿದಂತೆ ಆಗಿರುವದು.

**ಇಂದ್ರ**:— (ಆತ್ಮಗತಾ) ಏನು ಕೇಳುವೆನೋ ಅವೆಲ್ಲವೂ ಆಶ್ಚರ್ಯವೇ. (ಪ್ರಕಾಶ) ಒಳ್ಳೇದು ! ನಿನಗೆ ಹುಚ್ಚು ಹಿಡಿದಂತೆ ನಿನ್ನ ಅಪೇಕ್ಷೆಯು ಪೂರ್ಣವಾಯಿತೋ ಇಲ್ಲವೋ ?

**ನಾರದ**:— ಆದರೆ ಅವರ ಅಪೇಕ್ಷೆಯು ಪೂರ್ಣವಾಗಿ, ಅವರಿಗೆ ಬದಲಾಗಿ ಇವರಿಗೆ ಹುಚ್ಚು ಹಿಡಿಯುವದು.

ಇಂದ್ರಃ— ನೀನು ಹೀಗೆ ಕೆಳಗೆ ಮೋರೆಮಾಡಿಕೊಂಡು ನಿಂತರೆ, ನನಗೆ ಹೇಗೆ ಕಾಣುವದು.

೧೩ ರಾಗ ಕಮಾಚ, ತಾಳ ದಾದರಾ.

**ಚಂದ್ರಬಿಂಬವೋ ಮೀರಸ್ಮರನ ಪತಾಕೆಯೋ। ಮನೋ**
**ಹರೆ ॥ ರೂಪ ಪ್ರಕಾಶಕೆ ಮೋಹಿತನಾದೆ। ಈಪರಿ**
**ಶೋಭಾನ್ವಿತೆಯು ಕಾಣೇ ||೧||**

## ಪ್ರವೇಶ ೬,

### ಉದ್ಯಾನ.

( ಸ್ತ್ರೀರೂಪದ ತುಬುರ ಮತ್ತು ಮಹಾನಂದೆ ಪ್ರವೇಶ. )

**ತುಂಬುರಃ**— ಮಹಾನಂದಾದೇವಿ ನಮ್ಮಂತಹ ದರಿದ್ರಪ್ರಾಣಿಗಳು ದುಃಖಪಡುವದು ಒಂದು ಪ್ರಕಾರದಿಂದ ಶೋಭಿಸುವದು. ಆದರೆ ತಮ್ಮಂತಹ ಸರ್ವೈಶ್ವರ್ಯಯುಕ್ತ ಮನುಷ್ಯರು ದುಃಖದಿಂದ ಇರುವದು ಆಶ್ಚರ್ಯವೇ ಸರಿ.

**ಮಹಾ.**— ನೀನು ಇನ್ನೂ ಚಿಕ್ಕವಳು. ನಿನಗೆ ಜಗತ್ತಿನ ಅನುಭವವೇ ಇಲ್ಲಾ. ಆದ್ದರಿಂದ ಹೀಗೆ ಅನ್ನುತ್ತಿ.

೧೪ ರಾಗ ಯಮುನ, ತಾಳ ಧುಮಾಳಿ.

**ಸಖಿ ವೇಶ್ಯಾ ಜನಕೆ ಈ ಸಂಸಾರದಿ। ಸುಖವೇನಿದೆ ||**
**ನಾಂ ಕಾಣೆನೆ ನೀ ಪೇಳೆಲೆ ॥ಪಲ್ಲ॥**
**ಇಂತು ಬಾಹ್ಯದೋಳಾಡಂಬರವೇ ॥ ಅಂತರ್ಯದೊಳು**
**ಬಹುಘಾತಕವೇ || ಚಿಂತಿಸಿ ಪುಸಿಯುನಾಡ್ವರೇ ॥**
**ಸಂತತ ಪರಧನವಪಹರಿಸುತಲೇ। ಶಾಂತಿಯು ತಾಂ**
**ತೋರ್ಪರೇ ॥ ಸಂತೋಷದೆ ||೧||**

**ತುಂಬುರಃ**—ಮಹಾನಂದಾದೇವಿ, ತಾವು ಹೇಳುವದು ನಿಜ. ಜಗತ್ತಿನಲ್ಲಿ ಪತಿ ಪತ್ನಿಯರು, ಪಿತಾ ಪುತ್ರರು, ಗುರು ಶಿಷ್ಯರು, ರಾಜಪ್ರಜೆಗಳು ಒಬ್ಬರಮೇಲೊಬ್ಬರು ಪ್ರೀತಿಮಾಡುವದು ಎರಡನೇಯವರ ಕಲ್ಯಾಣಕ್ಕೋಸ್ಕರವಲ್ಲಾ. ತಮ್ಮ ಸುಖಕ್ಕೋಸ್ಕರವೇ ಮಾಡುತ್ತಾರೆ.

**ಮಹಾ**:— ಈಗ ಮಾತ್ರ ನೀನು ಸರಿಯಾಗಿ ಮಾತನಾಡಿದೆ. ಅದಕ್ಕೋಸ್ಕರವೇ ಈ ಜಗತ್ತಿಗೆ ಕೊಡಕೊಳ್ಳುವ ಬಾಜಾರವೆನ್ನುತ್ತಾರೆ. ಅದೇನು ಸುಮ್ಮನೆ ಏನು? ಮತ್ತು ಈ ಬಾಜಾರವಾದರೂ ನಿಜವಾದದ್ದಲ್ಲ. ಯಾಕಂದರೆ

೧೫ ರಾಗ ಬೇಹಾಗ, ತಾಳ ತ್ರಿವಟ.

**ಜಗಮಾಯಾಮಯವೇ। ಮೃಗಜಲ ಸಮ ಸಂಸಾರವಿ**
**ದುವೆ ಸಖಿ ನಿಶ್ಚಯವಿದು ತಿಳಿಯೆ ॥ಪಲ್ಲ॥**
**ಪಕ್ಷಿಸಮಾಕುಲ। ಸಾಯಂಕಾಲದಿ। ವೃಕ್ಷಾಶ್ರಯವನು**
**ಪೊಂದಿ।**
**ಪ್ರಾತಃಕಾಲವನು ॥ ಈಕ್ಷಿಸಿ, ಪಾರುವದಾತೆರದೀನಮ್ಮಯ**
**ಸ್ಥಿತಿಯೋ ॥೧॥**

( ರಸ್ತಾ ಪಡದೆಯ ಮುಂದೆ ವಿಶ್ವಮೋಹಿನಿಯ ಪ್ರವೇಶ. )

**ವಿಶ್ವ**:— ಮಹಾನಂದೆ, ಸಾಕಾಯಿತಮ್ಮ ನಿನ್ನ ಸಹವಾಸವು.

**ಮಹಾ**:— ಅಮ್ಮಾ ಏನಾಯಿತು?

**ವಿಶ್ವ**:— ನಿನ್ನ ತಲೆ. ಏನೆ? ಇದು ಸಾಯಂಕಾಲದ ಸಮಯ. ನಮ್ಮ ಮನೆಗೆ ಒಳ್ಳೆ ಮನುಷ್ಯರು ಬರುತ್ತಾರೆ. ಕೆಟ್ಟ ಮನುಷ್ಯರುಬರುತ್ತಾರೆ. ಯಾರು ಬಂದು, ಗಾಯನಮಾಡುವದಕ್ಕೆ ಹೇಳುವರು. ಯಾರು, ನರ್ತನಮಾಡುವದಕ್ಕೆ ಹೇಳುವರು. ಇಂಥಾ ಸಮಯದಲ್ಲಿ ಮನೆಯಲ್ಲಿ ತಂಬೂರಿ ತೆಗೆದುಕೊಂಡು ಹಾಡುತ್ತಾಕೂಡುವದನ್ನು ಬಿಟ್ಟು, ಉಪವನದಲ್ಲಿ ಬ್ರಹ್ಮಜ್ಞಾನದಿಂದ ಕಾಲಕಳೆಯಬೇಕೇ?

**ಮಹಾ:**— ಅಮ್ಮಾ! ಮನೆಯಲ್ಲಿ ಅಕ್ಕನಂತು ಇದ್ದೇ ಇರುವಳು. ಸಾಯಂಕಾಲದಲ್ಲಿ ನೀನೂ ಅವಳೂ ಕೂಡಿ, ಬಂದಂಥ ಜನರಿಗೆ ಆನಂದ ಪಡಿಸುತ್ತೀರಿ. ಅಂದಮೇಲೆ ನಾನಿದ್ದು ಮಾಡುವದೇನು.

**ವಿಶ್ವ:**— ಮಹಾನಂದೆ! ಎಂದಾದರೂ ನಾನು ನಿನ್ನ ಮುಂದೆ ನಮ್ಮ ಉದ್ಯೋಗದ ವಿಷಯದ ಮಾತುತೆಗೆದಕೂಡಲೇ ನೀನು ಹಾರಿಸಿ ಉತ್ತರ ಕೊಡುವಿ. ನಿನ್ನ ಮನಸ್ಸಿನಲ್ಲಿ ಇರುವದಾದರೂ ಏನು. ನಮ್ಮ ಕುಲವನ್ನೇ ನಿರ್ಮೂಲ ಮಾಡಬೇಕೆಂದು ಯೋಚಿಸಿರುವಿಯಾ?

**ಮಹಾ:**— ಛೀ. ಛೀ. ಅದನ್ನು ಉನ್ನತಾವಸ್ಥೆಗೆ ತರಬೇಕಾಗಿದೆ.

೧೬ ಮಾಂಡ, ತಾಳ ಕೇರವಾ.

**ಈತೆರವಿಹುದೇನೆ। ಸ್ತ್ರೀಜಡದೇಹವುತಾ ॥ಪಲ್ಲ॥**
**ನಗರನಾಲ್ಕುಪಥಕಿರಿಸಿದ ದರ್ಪಣ ॥ ಮೊಗವನುನೋಳ್ಪ**
**ದಕೇ ॥೧॥ ಉರಗ ಶಿರದಮಣಿ। ಭಂಗಿಸಿಪ್ರೋಗೆ ॥**
**ಇರಿಸುವರಾರದನೇ ॥೨॥**

**ವಿಶ್ವ:**— ಇಂಥಾ ದುಡಿಯುವಕಾಲದಲ್ಲಿ ನಿಮ್ಮಂತಹ ತರುಣ ಹುಡುಗಿಯರು ಉದ್ಯೋಗವನ್ನು ಬಿಟ್ಟು, ಹರಟೆಕೊಚ್ಚುತ್ತಾ ಕಾಲಕಳೆಯುಹತ್ತಿದರೆ, ನಿರಾಶರಾಗದೆ ಮತ್ತೇನು ಮಾಡಬೇಕು.

**ಮಹಾ:**— ನಿಜವು. ತೀರಾ ನಿಜವು. ದೇಹದವಾರ್ಧಿಕ್ಯವೇ ಆಶೆಯುತಾರುಣ್ಯವು.

**ವಿಶ್ವ:**— ಇನ್ನು ನನಗೇತರ ಆಶೆಯು. ನಾನು ಆಳುವದು ನಿನ್ನ ಸುಖಕ್ಕಾಗಿಯೇ.

**ಮಹಾ:**— ಸುಖದುಃಖಗಳು ಮನಸ್ಸಿನ ಮೇಲೆ ಅವಲಂಬಿಸಿರುವವು.

**ವಿಶ್ವ:**— ಅಹಾ! ನೀನೇನು ದೊಡ್ಡವೇದಾಂತಿಯೇ. ಅಲ್ಲೇ ದೇಹ

ದಲ್ಲಿ ಸರ್ವಗುಣಗಳು ಯಥಾಸ್ಥಿತವಾಗಿದ್ದು, ಮನುಷ್ಯನು ಒಂದು ವೇಳೆ ಅದರ ದುರಪಯೋಗ ಮಾಡಲಿಕ್ಕೆ ಹತ್ತಿದರೆ, ಜನರು ಅವನಿಗೆ ಹೆಸರು ಇಡುವರು. ಅದರಂತೆ ನಿನಗೂ ಇಟ್ಟಾರು.

**ಮಹಾ.**:—ಅಮ್ಮಾ! ಜನರು ಬೇಕಾದಂತೆ ಮಾತಾಡುತ್ತಾರೆ. ಆದರೆ ನಾವು ನಮ್ಮ ಬಗ್ಗೆ ವಿಚಾರಮಾಡಬೇಕು. ಮನೆಯಲ್ಲಿ ಸರ್ವಾನುಕೂಲ ವಿದ್ದಮೇಲೆ ನಮ್ಮ ಮನೆಗೆ ಬರುವಂಥ ದ್ರವ್ಯಾಂಧ ಮತ್ತು ಕಾಮಾಂಧ ಜನರ ಮುಂದೆ ನಾನು, ನನ್ನ ಸ್ವರೂಪದ ಪ್ರದರ್ಶನ ಮಾಡುತ್ತಾ ಕೂಡ್ರಬೇಕೆ ? ಸ್ತ್ರೀಯರ ಸೌಂದರ್ಯವು, ಮರ್ಯಾದೆಯು ಪಡದೆಯಲ್ಲಿ ದ್ದರೆ, ಅದಕ್ಕೆ ಹೆಚ್ಚು ಬೆಲೆ ಮತ್ತು ಶೋಭೆಯುಂಟಾಗುವದು. ಅದನ್ನೇ ಒಂದು ವೇಳೆ ಬೀದಿಯಲ್ಲಿಟ್ಟರೆ, ಅದರ ಕಡೆಗೆ ಮನುಷ್ಯನೇ ಏಕೆ ಶುನಕ ಗಳು ಸಹ ತಿರುಗಿ ನೋಡಲಾರವು.

**ವಿಶ್ವ.**:— ಹುಚ್ಚಿ ! ನಿನ್ನಂತಹ ತಾರುಣ್ಯದಭರಕ್ಕೆ ಬಂದು, ಗಾಯನ ನರ್ತನಗಳಿಂದ ನಟಿಸಿಕೊಂಡ ವೇಶ್ಯಾಂಗನೆಯರು ತಮ್ಮ ಸ್ವರೂಪ ವನ್ನು ಕಾಮಾಂಧರಾದ ಜನರ ಉಪಯೋಗಕ್ಕೆ ಬೀಳಗೊಡದಿದ್ದರೆ, ಕಾಮ ವಿಮ್ಮುಖರಾದ ಮುಪ್ಪಿನವರ ಕೊರಳಿಗೆ ಕಟ್ಟಬೇಕೆ ?

**ಮಹಾ**:— ಆ ತಾರುಣ್ಯವು ಕಾಮಾಂಧರೂ ಮತ್ತು ಕಾಮ ವಿಮ್ಮುಖರಾದವರಿಗೋಸ್ಕರ ಇರದೆ, ಯಾವನು ಕಾಮನನ್ನು ದಹನಮಾಡಿದನೋ ಅವನಿಗೆ ಗೋಸ್ಕರ ಹುಟ್ಟಿರುವದು ತಿಳಿಯತೇ.

**ವಿಶ್ವ.**:—ನಾನು ಹೀಗೇ ನೀನು ಹೇಳುವದನ್ನೆಲ್ಲಾ ಸುಮ್ಮನೆ ಕೇಳು ತ್ತಾ ಕೂತರೆ, ನಿನ್ನ ಬ್ರಹ್ಮಜ್ಞಾನವು ಮತ್ತಿಷ್ಟು ಬೆಳೆಯುತ್ತ ಹೋಗುವದು. ಇರಲಿ. ನಾಳೆ ನಿನಗೆ ಏಕಾದಶಿ ಮಾಡಿಸುತ್ತೇನೆ. ಅಂದರೆ, ನಿನ್ನ ಬ್ರಹ್ಮ ಜ್ಞಾನವು ಎಲ್ಲಿರುವದು ನೋಡೋಣ.

(ಸಿಟ್ಟಿನಿಂದ ಹೊರಟುಹೋಗುವಳು.)

**ತುಂಬುರಃ**— ಮಹಾನಂದಾದೇವಿ ಎಂತಹ ಕುಲದಲ್ಲಿ ಜನ್ಮವಾದರೂ ತಾವೇಕೆ ಅದರಬಗ್ಗೆ ವಿಷಾದಪಡುವಿರಿ. ಅದು ನಮ್ಮ ದೋಷವಲ್ಲ ಜನ್ಮಕೊಟ್ಟವರ ದೋಷವು. ತೀರಾ ನೀಚ ಕುಲದಲ್ಲಿ ಜನಿಸಿ, ಶ್ರೇಷ್ಠ ಕುಲದಲ್ಲಿ ಹುಟ್ಟಿದ ಜನರಿಗೆ ನಾಚಿಕೆಯಾಗುವಂಥ ಸತ್ಕೃತ್ಯ ಮಾಡಿ, ತಮ್ಮ ಜನ್ಮವನ್ನು ಸಾರ್ಥಕ ಮಾಡಿಕೊಂಡಂಥ ಜನರ ಉದಾಹರಣೆಗಳು, ಪುರಾಣದಲ್ಲಿ ಬೇಕಾದಷ್ಟು ದೊರೆಯುವವು. ವಾರಾಂಗನೆಯರ ಕುಲದಲ್ಲಿ ಜನಿಸಿ, ಕುಲಸ್ತ್ರೀಯರನ್ನು ನಾಚಿಸುವಂಥ ಎಷ್ಟೊ ಕಾರ್ಯಗಳನ್ನು ಮಾಡಲಾಗುವದು.

**ಮಹಾಃ**— ಅದು ಹೇಗೆ ?

**ತುಂಬುರ**.ಃ— ಕುಲಸ್ತ್ರೀಯರು ಪತಿಯೇ ಪರದೈವವೆಂದು ಹೇಗೆ ಕಾಯಾ, ವಾಚಾ, ಮನಸ್ಸಿನಿಂದ ಪೂಜೆಯನ್ನು ಮಾಡುವರೋ ಆದರಂತೆ ವಾರಾಂಗನೆಯರು ತಮ್ಮ ಯಜಮಾನನ ಸೇವೆಯನ್ನು ಮಾಡಬೇಕು ಅಂದರಾಯಿತು.

**ಮಹಾ**:— ಏನೆ ದಿನಾಲು ಹೊಸ ಹೊಸ ದೇವರ ಪೂಜಾ ಮಾಡುವ ಪ್ರಸಂಗ ಹತ್ತಿದರೆ, ಆ ಭಕ್ತಳ ಮನಸ್ಸು ಏಕಾಗ್ರತೆ ಆಗುವ ಬಗೆ ಹೇಗೆ ? ಮತ್ತು ಮನಸ್ಸಿನ ಏಕಾಗ್ರತೆ ಯಾಗದ ಹೊರತು ಯಾವದಾದರೂ ಅಂತಿಮ ಧ್ಯೇಯವು ಎಂದೂ ಸಾಧ್ಯವಾಗುವದಿಲ್ಲ. ಇದಕ್ಕೇನು ಮಾಡಬೇಕು ?

**ತುಂಬುರ**:— ಯಾವನು ಈ ಭೂಮಿಗೆ ಸರಿಯಾದ ಬೆಲೆಯುಳ್ಳ ಕಂಕಣವನ್ನು ತಂದು ಕೊಡುವನೋ, ಅಂಥ ಯಜಮಾನನ್ನೇ ನಾನು ಮಾಡುವೆನೆಂದು ನೀನು ಪಂಥವನ್ನು ಮಾಡು.

**ಮಹಾಃ**— ಅಂದರೇನಾಗುವದು ?

**ತುಂಬುರ**:— ಅಂದರೆ ಮಗಳು ಕುಲಾಚಾರದಂತೆ ನಡಿಯಲಿಕ್ಕೆ ಒಪ್ಪಿದಳೆಂದು, ನಿಮ್ಮ ತಾಯಿಗೆ ಬಹಳ ಸಂತೋಷವಾಗುವದು; ಮತ್ತು ಅನೇಕ ಪುರುಷರ ಸಂಗಡ ಸ್ನೇಹ ವಾಗುವ ಭೀತಿಯು, ತಾನೇ ತಪ್ಪಿ ಹೋಗುವದು.

**ಮಹಾ**:— ಆದರೆ ಭೂಮಿಗೆ ಸರಿಯಾದ ಬೆಲೆಯುಳ್ಳ ಕಂಕಣವನ್ನು ತಂದು ಕೊಡುವರಾದರೂ ಯಾರು ?

**ತುಂಬುರ**:— ಏಕೆ ದೊರೆಯಲಿಕ್ಕಿಲ್ಲಾ ? ದೇವಿ ನಿಮ್ಮ ಯೋಗ್ಯತೆಯೇನು ಕಡಿಮೆಯಾಗಿರುವದೇ ! ಇಂಥಾ ಸಾವಿರಾರು ಬಹುರತ್ನಾವಸುಧರಿಯರು ಈ ನಿಮ್ಮ ಅಂಗುಷ್ಠಕ್ಕೆ ಸರಿಯಾಗಲಾರರು. ಇಂತಹ ರತ್ನವನ್ನು ತನ್ನ ವಾಮಾಂಕದಲ್ಲಿ ಧರಿಸುವ ಇಚ್ಛೆಯುಳ್ಳವನಾದರೂ, ಅನೇಕ ರತ್ನಾಕರಗಳ ಒಡೆಯನೇ ಆಗಿರಬೇಕು.

**ಮಹಾ**:— ನಿನ್ನ ಮಾತು ತೀರಾ ನಿಜವು. ಪೂರ್ವದಲ್ಲಿ ಸತ್ವಧೀರಮನುಷ್ಯರ ಸತ್ವವನ್ನು ಹರಣ ಮಾಡುವದಕ್ಕೋಸ್ಕರ ಅವರ ಆರಾಧ್ಯ ದೇವತೆಗಳು ಬರುತ್ತಿದ್ದರಂತೆ. ಇಂದಿನಿಂದಾ ನಾನು ನಿನ್ನ ಉಪದೇಶದಂತೆ ನಡೆಯುವೆನು. ಗೆಳತಿ ಇಂದಿನಿಂದಾ ನೀನು ನನಗೆ ದಾಸಿಯಲ್ಲಾ. ನಾವೀರ್ವರು ಒಂದೇ ಮಾತೆಯ ಉದರದಲ್ಲಿ ಹುಟ್ಟಿದ ಅಕ್ಕತಂಗಿಯರಂತೆ ನಡಕೊಳ್ಳೋಣ ತಿಳಿಯಿತೆ.

**ತುಂಬುರ**:— ( ಸ್ವಗತ ) ಹೇ ಜಗಜ್ಜನನೀ, ಆದಿಶಕ್ತಿ, ಆದಿಮಾಯೆ, ದಾಕ್ಷಾಯಿಣೀ ಮಹಾಕಾಲನ ಶಾಪದಿಂದ ಭ್ರಾಂತಚಿತ್ತಳಾದ್ದರಿಂದ, ನೀರಿನಲ್ಲಿ ಮುಳುಗುವ ಮನುಷ್ಯನು, ಹೇಗೆ ದರ್ಭಾಂಕುರದ ಆಶ್ರಯವನ್ನು ಬೇಡುವನೋ, ಅದರಂತೆ ನೀನು ಈ ದಾಸನಿಗೆ ಸನ್ಮಾನವನ್ನು ಕೊಡುತ್ತಿರುವೆ. ನಾನಾದರೂ ಅದನ್ನು ಸ್ವೀಕಾರಮಾಡಿ, ನಿನಗೆ ಅಭಿವಚನ ಕೊಡುತ್ತೇನೆ.

ಮಹಾಃ—

೧೭ ರಾಗ ಆನಂದಭೈರವಿ, ತಾಳ ತ್ರಿವಟ.

ಪ್ರೇಮಾಶಾಂತೀಯಾ ತೊರದೇ ॥ ಸುಮನದಿ ಶಂಕರನ
ಪಾದಕಮಲಸ್ವಾಡ । ಭಜಿಸಿ ನೋದಪೊಂದುವೆ ‖ಪಲ್ಲ‖
ಈರ್ವರು ಭಗಿನಿಭಾವದಿಂದಾ । ನೆರೆಸುಖಪೊಂದಿಮನದಾ ॥
ಬೀರುತಲೆ ಹಿತಾಹಿತವಾ ಹರಣಾಭಿಮಾನತೊರದೂ ‖೧‖



# ಪಾರ್ವತೀ ಸತ್ವಪರೀಕ್ಷೆ.

## ದ್ವಿತಿಯಾಂಕ.

---

### ಪ್ರಥಮರಂಗ—ಅಂತಃಪುರ.

( ವಿಶ್ವಮೋಹಿನಿ ಮತ್ತು ಸದಾನಂದೆ ಇರುವರು. )

**ವಿಶ್ವ:**— ಏನು ? ನಿನ್ನೆ ರಾತ್ರಿ ಅವರಿಗೆ ನಿನ್ನ ವಿಷಯದಲ್ಲಿ ಸಂಶಯ ಬಂದಿತೇ ?

**ಸದಾ:**— ಹೌದು. ತಾಂಬೂಲವನ್ನು ಕೊಡುವಕಾಲಕ್ಕೆ ಚಮತ್ಕಾರ ದೃಷ್ಟಿಯಿಂದ ಅವರು ನನ್ನನ್ನು ನೋಡಿದರು.

**ವಿಶ್ವ:**— ಸ್ತ್ರೀಯರ ಕೈಯೊಳಗಿನಿಂದ ತಾಂಬೂಲವನ್ನು ತಕ್ಕೊಳ್ಳುವ ಕಾಲಕ್ಕೆ, ಪುರುಷರು ಚಮತ್ಕಾರ ದೃಷ್ಟಿಯಿಂದ ನೋಡುವ ಸಮಯವೇ ಆಗಿರುವದು. ಅದಕ್ಕೇನೂ ಭೀತಿಗೊಳ್ಳುವ ಕಾರಣವಿಲ್ಲ.

**ಸದಾ:**— ಆದರೆ, ಅಮ್ಮಾ! ನನಗೆ ಈ ಕೃತ್ಯವನ್ನು ಮಾಡುವಾಗ್ಗೆ ಎದೆಯು ಒಂದೇಸವನೆ ಹೊಡದುಕೊಳ್ಳಹತ್ತುವದು.

**ವಿಶ್ವ:**— ಇದೊಂದೇ ದಿವಸ ಮಾಡು. ಅಂದರೆ, ಅವನನ್ನು ನಾಳೆ ದಿವಸ ಹಾದಿಗೆ ಹಚ್ಚುತ್ತೇನೆ.

**ಸದಾ:**— ಅಮ್ಮಾ! ಇದರಿಂದ ನಮಗೆ ಪಾಪವು ಬರುವದಿಲ್ಲವೇ ?

**ವಿಶ್ವ:**— ಛೀ ಹುಚ್ಚಿ! ಕುಲಧರ್ಮ ಕುಲಾಚಾರವನ್ನು ಮಾಡುವಾಗ್ಗೆ ಪಾಪ ಬರುವದೇ ?

**ಸದಾ:**— ನಮ್ಮ ಕುಲಧರ್ಮವಾವುದು ?

**ವಿಶ್ವ:**— ಕನಿಷ್ಟ ಪಕ್ಷಕ್ಕೆ ನೂರುಜನ ಯಜಮಾನರನ್ನು ಮಾಡಬೇಕು. ಇದೇ ನಮ್ಮ ಕುಲಧರ್ಮವು.

**ಸದಾ:**— ಮತ್ತು ಕುಲಾಚಾರವೆಂದರೆ?

**ವಿಶ್ವ:**— ಮತ್ತ ಆ ಯಜಮಾನರಲ್ಲಿ ಪ್ರತಿಒಬ್ಬನಿಗೂ ಏನಾದರೂ ಅಪಘಾತ ಮಾಡಲೇ ಬೇಕು.

**ಸದಾ:**— ಇದಕ್ಕೇನಾದರೂ ಆಧಾರವಿರುವದೇ?

**ವಿಶ್ವ:**— ಓಹೋ. ಆಧಾರಕ್ಕೇನು ಕಡಿಮೆ? ಯಾರು ದೇವರ ಮುಂದೆ ಕಾಯಿ ಒಡಿಯುವರು. ಯಾರು ದೇವರ ಮುಂದೆ ಕುರಿ ಕಡಿಯುವರು. ಇವೇನು ಸಣ್ಣ ಪುಟ್ಟ ಆಧಾರಗಳೇ?

**ಸದಾ:**— ಅಮ್ಮಾ, ಒಬ್ಬರದು ಒಂದು ಥರ. ಮತ್ತೊಬ್ಬರದು ಇನ್ನೊಂದು ಥರ. ಹೀಗೆ ಏಕೆ?

**ವಿಶ್ವ:**— ಸೃಷ್ಟಿಕ್ರಮವೇ ಹೀಗೆ ಇರುವದು. ಬ್ರಾಹ್ಮಣನು ಸಂತುಷ್ಟನಿದ್ದರೆ, ಯೋಗ್ಯತೆಗೆ ಮುಟ್ಟುವನು. ರಾಜನು ಸಂತುಷ್ಟನಿದ್ದರೆ, ಪದಚ್ಯುತನಾಗುತ್ತಾನೆ. ಅದರಂತೆ ಕುಲಾಂಗನೆಯು ಮರಿಯಾದೆಯಿಂದ ಇದ್ದರೆ, ಸ್ವರ್ಗಕ್ಕೆ ಹೋಗುತ್ತಾಳೆ. ಆದರೆ, ವಾರಾಂಗನೆಯು ಮರಿಯಾದೆಯನ್ನು ಹಿಡಿದುಕೊಂಡು ಇದ್ದರೆ, ಭಿಕ್ಷಾಪಾತ್ರಳಾಗುವಳು. ಒಬ್ಬನ ಪುಣ್ಯಕ್ಕೆ ಮತ್ತೊಬ್ಬನ ಪಾತಕವು ಒಳ್ಳೇದು. ಅದೋ ನೋಡು ನಿಮ್ಮ ಯಜಮಾನರು ಬಂದರು. ಮೊದಲು ಕೊರಳೊಳಗಿನ ರತ್ನಹಾರವನ್ನು ಹೇಗಾದರೂ ಮಾಡಿ ತಕ್ಕೊ. ಅಂದರೆ ನಿನಗೆ ಈ ದಿನ ಕೇಶರಭಾತ ಮಾಡಿಹಾಕುತ್ತೇನೆ. ಹಾ.

( ಇಂದ್ರ ಪ್ರವೇಶ. ಸದಾನಂದೆ, ಎಲೆಪಟ್ಟಿಯನ್ನು ಕೊಡು. )

**ಇಂದ್ರ:**— ( ಬೇಸರಪಡುತ ) ಸಾಕಾಯಿತು. ಆ ನಿನ್ನ ತಾಂಬೂಲವು. ಎಲೆ ತಿಂದು, ತಿಂದು, ಬಾಯಿ ಎಲ್ಲಾ ವರಟಾಗಿ ಹೋಯಿತು. ಮತ್ತು ಗಂಟಲು ಒಣಗಲಿಕ್ಕೆ ಹತ್ತಿತು.

**ವಿಶ್ವ:**— ಹೀಗೇಕೆ ಅಭದ್ರ ಮಾತಾಡುವದು?

**ಇಂದ್ರ:**— ಇದರಲ್ಲೇನು ಅಭದ್ರ ಮಾತಾಡಿದೆ ? ಗಂಟಲು ಒಣಗುವದು ಎಂದೆನು.

**ವಿಶ್ವ:**— ಹಣೆಗೆ ಕಲೆ ಬೀಳುವದೆಂದು ಮುತ್ತೈದೆಯರು ಕುಂಕುಮ ಹಚ್ಚದೇ ಇರುವದು. ಗಂಟಲು ಒಣಗುವದೆಂದು ನಿಮ್ಮಂತಹ ಶೃಂಗಾರಿಕ ವಿಟಪುರುಷರು ತಾಂಬೂಲವನ್ನು ಸೇವಿಸದೇ ಇರುವದು, ಇದೆಲ್ಲಾ ಅಭದ್ರವೇ.

**ಇಂದ್ರ:**— ನನಗೆ ಮೂಲತಃ ತಾಂಬೂಲವೇ ಸೇರುವದಿಲ್ಲ ! ಹೀಗೇನೂ ಅಲ್ಲ. ಕೆಲಕೆಲವು ಹೆಂಗಸರು ನಾವು ಮುತ್ತೈದೆಯರು ಅಹುದೋ ಅಲ್ಲವೋ ಎಂಬ ಭ್ರಾಂತಿ ಉತ್ಪನ್ನವಾಗುವಂತೆ ಹೇಗೆ ಕುಂಕುಮವನ್ನು ಸಣ್ಣದಾಗಿ ಹಚ್ಚುವರೋ ? ಅದರಂತೆ ನಾನು ಶೃಂಗಾರಿ ಪುರುಷನು ಅಹುದೋ ಅಲ್ಲವೋ ಎಂಬ ಭ್ರಾಂತಿ ಉತ್ಪನ್ನವಾಗುವಂತೆ ಸಣ್ಣ ಎಲೆಪಟ್ಟಿಯನ್ನು ಮಾಡಿ ತಿನ್ನುತ್ತೇನೆ.

**ವಿಶ್ವ.:** – ಆದರೆ, ಕುಂಕುಮವನ್ನು ಸಣ್ಣದಾಗಿ ಹಚ್ಚುವದರಿಂದ ಹೇಗೆ ಹೆಂಗಸರ ಮುತ್ತೈದೆತನವು ಅನುಚಿತ ಕಾಣುವದೋ, ಅದರಂತೆ ಸಣ್ಣ ಎಲೆಪಟ್ಟೆಯಿಂದಾ ನಿಮ್ಮ ಶೃಂಗಾರವು ಕಂಡೀತು. ಆದ್ದರಿಂದ ಅವಳು ಚನ್ನಾಗಿ ತಯಾರಿಸಿದ ತಾಂಬೂಲವನ್ನು ಕೊಡುತ್ತಾಳೆ. ಸ್ವೀಕಾರ ಮಾಡಿರಿ.

**ಇಂದ್ರ:**— ಒಳ್ಳೇದು.

**ವಿಶ್ವ:**— ಮಗಳೇ, ನಾನು ಈ ನಿಮ್ಮ ಶೃಂಗಾರವನ್ನು ನೋಡುತ್ತಾ ಎಷ್ಟು ಹೊತ್ತು ಹೀಗೇ ನಿಂದರಬೇಕು ?

**ಇಂದ್ರ:**— ತಾವು ನಿಲ್ಲುವದೇಕೆ ಕುಳಿತುಕೊಳ್ಳಿರಿ.

**ವಿಶ್ವ:**— ಪಾಡಿಗೆ ಬಂದ ಆಮ್ರಫಲಗಳಲ್ಲಿ ಒಣಗಿದಂಥ ಆಮ್ಲೋಲ ಏತಕ್ಕೆ ?

ಇಂದ್ರ:— ಬೇಡವೆ? ಹಾಗಾದರೆ ಹೋಗಿರಿ.

ವಿಶ್ವ:— ಹೇಗೆ ಹೋಗಬೇಕು?

ಇಂದ್ರ:— ಏಕೆ? ಕಾಲುಗಳಿಗೆ ಜುಮ್ಮು ಹಿಡಿದಿದೆಯೊ? ಚನ್ನಾಗಿ ಅಪ್ಪಳಿಸುತ್ತಾ ಅಪ್ಪಳಿಸುತ್ತಾ ಹೋದರಾಯಿತು.

ವಿಶ್ವ:— ಹಾಗಲ್ಲ! ಈ ಹುಡುಗಿಯು ಒಂದೇ ಸವನೇ ನನ್ನ ಬೆನ್ನು ಹತ್ತಿರುವಳು. ನಿಮ್ಮ ಕೊರಳೊಳಗಿನ ಮುತ್ತಿನ ಹಾರವು ಇವಳಿಗೆ ಬೇಕಾಗಿರುವದಂತೆ.



ಇದ್ರ:— ಇಷ್ಟೇ ಅಲ್ಲವೇ. ಇಕ್ಕೊಳಿರಿ. (ಹಾರವನ್ನು ಕೊಡುತ್ತಾನೆ.) ಇಷ್ಟು ಹೊತ್ತಿನವರೆಗೆ ಏಕೆ ಕೇಳಲಿಲ್ಲ?

ವಿಶ್ವ:— ಹೇಗೆ ಕೇಳಬೇಕು? ಕೇಳಿದರೆ ಅಧಿಕಪ್ರಸಂಗವಾದೀತ. ಕೇಳದಿದ್ದರೆ ನಿಮಗೆ ತಿಳಿಯುವದಿಲ್ಲ. ಮತ್ತು ನಮಗೆ ಅದೂ ದೊರೆಯುದಿಲ್ಲ. ಮಗಳೇ, ನಡೆಯಿನ್ನು ಹೋಗುವಾ.

ಇಂದ್ರ:— ಹಾ! ಅಂದರೆ, ನೀವು ಹೋಗುತ್ತೀರಿ. ಮತ್ತೆ ಇವಳನ್ನು ಕರೆದುಕೊಂಡು ಹೋಗುತ್ತೀರಾ.

ವಿಶ್ವ:—ಹೌದು. ನೋಡಿ, ನಮ್ಮ ಮನೆಯಲ್ಲಿ ಮುದುಕಿ ಇಲ್ಲವೇ? ಅವಳಿಗೆ ಈಗ ಒಂದು ಪ್ರಹರದಿಂದ ಏನೇನೋ ಆಗುತ್ತಿರುವದು. ಅವಳ ಸಮಾಧಾನಕ್ಕೋಸ್ಕರ ಇವಳನ್ನು ಅವಳ ಬಳಿಯಲ್ಲಿ ಕೂಡ್ರಿಸುತ್ತೇನೆ. ಇದೋ ನೋಡಿರಿ! ನಿಮ್ಮಂಥಾ ತರುಣ ಜನರು ನಮಗೆ ಬೇಕಾದಷ್ಟು ದೊರೆತಾರು. ಆದರೆ, ವೃದ್ಧ ಮನುಷ್ಯರು ಒಮ್ಮೆ ಕೈತಪ್ಪಿ ಹೋದಮೇಲಿ ತಿರಿಗಿ ದೊರೆಯುವರೇ. ನೀವೇ ಹೇಳಿರಿ. ಮಗಳೇ, ನಡೆ ಇನ್ನು. ಇದೋ ನಿಮ್ಮ ಬಳಿಯಲ್ಲಿ ಯಾರಾದರೂ ಬೇಕಾಗಿದ್ದರೆ, ಆ ನಿಮ್ಮ ನಾರ್‍ಯಾನನ್ನು ಕಳುಹಿಸುತ್ತೇನೆ. ಅದೋ! ಅವನೇ ಬಂದನು. ಬಾ ಮಗನೇ, ನಿನಗೆ ಸಂಪೂರ್ಣ ಆಯುಸ್ಯವಿರುವದು. ಶೀಘ್ರಿಯುವರು ನಿನ್ನನ್ನೇ ಸ್ಮರಿಸಿದರು. ಬೇಗನೇ ಸ್ನಾನವನ್ನು ಮಾಡಿರಿ. ನಾನು ಕೇಶರಭಾತನ್ನು ಮಾಡತಕ್ಕವಳಿದ್ದೇನೆ.

**ಇಂದ್ರ:**— ನಾನೆಲ್ಲಿ ಇವನನ್ನು ಸ್ಮರಿಸಿದೆ ?

**ವಿಶ್ವ:**— ನೀವೇನು ನಾವೇನು ? ಎಲ್ಲಾ ಒಂದೇ. ಮಗಳೇ, ನಡೆ ಇನ್ನು. ಅವರಿಗೆ ನಿನ್ನ ಮೇಲಿನ ಮೋಹವೇ ತಪ್ಪುವದಿಲ್ಲ. ಮಾಡುವದೇನು !

**ಇಂದ್ರ:**— ಈ ಮುದುಕಿಯು ಇಂಥಾ ತಾಟಗಾರ್ತಿಯಾಗಿರುವಳು ನಾನು ಇಲ್ಲಿಗೆ ಬಂದಾಗಿನಿಂದ ಒಂದೇಸವನೇ ನನ್ನನ್ನು ಸುಲಿಯುತ್ತಿರುವಳು. ಒಂದು ನಿಮಿಷವಾದರೂ ಏಕಾಂತದಲ್ಲಿ ಭೆಟ್ಟಿಮಾಡಗೊಡುವದಿಲ್ಲ. ನಾರ್ಯಾ.

**ನಾರ್ಯಾ:**— ಓ ! ಓ ! ಏಕೆ ಧಣಿಯರೇ ?

**ಇಂದ್ರ:**— ನಾರ್ಯಾ ನನಗಂತೂ ಈ ಮಹಲಿನಲ್ಲಿ ಪಿಶಾಚಿಗಳ ಬಾಜಾರವೇಇದ್ದಂತೆ ಕಂಡು ಬರುವದು.

**ನಾರ್ಯಾ:**— ಏನು ? ಪಿಶಾಚಿಗಳ ಬಾಜಾರವೇ ? ಅಯ್ಯೋಯ್ಯೊ ಅಪ್ಪಾ ! ಅದು ಹೇಗೆ ?

**ಇಂದ್ರ:**— ಅದು ಹೇಗಂದರೆ, ನಾನು ಈ ಮಹಲಿನಲ್ಲಿ ಮಲಗಿದಿವನು ಬೆಳಗಾದಮೇಲೆ ಎಚ್ಚರವಾಗುತ್ತೇನೆ.

**ನಾರದ:**— ಏನು ? ರಾತ್ರಿ ಮಲಗಿದವರಿಗೆ ಬೆಳಗಾದಮೇಲೆ ಎಚ್ಚರವಾಗುವದೇ ? ಅಯ್ಯೋಯ್ಯಪ್ಪ ! ಅಂದಮೇಲೆ ಇನ್ನು ಹೇಗೆ ಮಾಡಿರಿ. ಬೆಳಿಗ್ಗೆ ಮಲಗಿಕೊಳ್ಳಿರಿ. ಅಂದರೆ ರಾತ್ರಿಯಲ್ಲಿ ಎಚ್ಚರವಾಗುವದು.

**ಇಂದ್ರ:**— ಹಾಗಲ್ಲ !

**ನಾರದ:**— ಮತ್ತೆ ಹೇಗೆ ?

**ಇಂದ್ರ:**— ಕೇಳು ರಾತ್ರಿಯಲ್ಲಿ ಒಮ್ಮೆ ಮಂಚದ ಮೇಲೆ ಬಿದ್ದೆನಂದರೆ, ಕೂಡಲೇ ನಿದ್ರೆ ಹತ್ತುವದು. ಮತ್ತು ಬೆಳಗಾದ ಮೇಲೆ ಎಚ್ಚರವಾಗುವದು. ನಡುವೆ ಹಾ ಇಲ್ಲಾ; ಹೂಂ ಇಲ್ಲ.

**ನಾರದಃ**— ಹೀಗೋ? ಅಂದಮೇಲೆ ಅದರಲ್ಲೇನಿರುವದ? ಒಬ್ಬೊಬ್ಬರಿಗೆ ನಿದ್ರೆ ಹೆಚ್ಚು ಬೇಕಾಗುವದು. ಕುಂಭಕರ್ಣನು ಆರಾರು ತಿಂಗಳವರೆಗೆ ನಿದ್ರೆ ಮಾಡುತ್ತಿರಲಿಲ್ಲವೇ?

**ಇಂದ್ರ:**— ಎಲೋ ಹಾಗಲ್ಲ.

**ನಾರದಃ**— ಹೀಗೂ ಅಲ್ಲವೇ ಮತ್ತೆ ಹೇಗೆ ?

**ಇಂದ್ರಃ**— ಹೀಗೆ ಚಮತ್ಕಾರವಾಗುವದು. ರಾತ್ರಿ ಮಂಚದ ಮೇಲೆ ಮಹಾನಂದೆಯು ಮತ್ತು ನಾನು ಆನಂದದಿಂದ ಮಾತನಾಡುತ್ತಾ ಕೂಡುತ್ತೇವೆ.

**ನಾರದ:**— ಏನು ? ಮಹಾನಂದೆಯು ಮತ್ತು ನೀವು ಮಾತಾಡುತ್ತಾ ಕೂಡುತ್ತಿರೋ ? ಇದೆಲ್ಲಾ ಸುಳ್ಳು.

**ಇಂದ್ರಃ**— ಏನನ್ನುತ್ತೀ ?

**ನಾರದ:**— ( ಆತ್ಮಗತ ) ಇವರು ಸದಾನಂದೆಗೆ ಮಹಾನಂದಿಯೆಂದು ಅನ್ನುವರು. ( ಪ್ರಕಾಶ ) ಹಾ. ಏನೂ ಇಲ್ಲ. ಮಹಾನಂದೆಯು ನೀವೂ ಮಾತಾಡುತ್ತಾ ಕೂಡುತ್ತೀರಿ. ಮುಂದೆ.

**ಇಂದ್ರ:**— ಮುಂದೆ, ನನಗೆ ಅವಳು ಒಳ್ಳೇ ಮಸಾಲೆಯುಕ್ತವಾದ ತಾಂಬೂಲವನ್ನು ಕೊಡುವಳು. ಅದನ್ನು ನಾನು ಸೇವಿಸುತ್ತೇನೆ.

**ನಾರದ:**— ತಾಂಬೂಲವನ್ನು ಸೇವಿಸುವಿರಾ. ಇಲ್ಲೇ ತಪ್ಪುವಿರಿ. ಒಳ್ಳೇದು ಏನೂ ಚಿಂತೆ ಇಲ್ಲ ಮುಂದೆ.

**ಇಂದ್ರಃ**— ಮುಂದೆ ನನಗೆ ಕೂಡಲೇ ಗಾಢ ನಿದ್ರೆಹತ್ತುವದು. ಮತ್ತು ಎಚ್ಚರವಾಗಿ ನೋಡುತ್ತೇನೆ. ನಾನು ಭೂಮಿಯ ಮೇಲೆ! ಮಂಚವು ನನ್ನ ಮೇಲೆ! ಮತ್ತು ಮಹಾನಂದೆಯು ಮಂಚದಮೇಲೆ! ಹೀಗಾಗುವದು.

**ನಾರದ:**— ಹೇಗೆ ? ಹೇಗೆ ?

**ಇಂದ್ರ**ಃ— ನಾನು ಭೂಮಿಯ ಮೇಲೆ ! ಮಂಚವು ನನ್ನ ಮೇಲೆ !

ಮತ್ತು ಮಹಾನಂದೆಯು ಮಂಚದಮೇಲೆ ! ಹೌದು. ಹೀಗೇ.

**ನಾರದ:**— ಛೀ. ಛೀ. ಹಾಗಲ್ಲಾ. ಹೀಗಿರಬಹುದು. ಮಹಾನಂದೆಯು ಕೆಳಗೆ ಮಂಚವು ! ಮಂಚದ ಕೆಳಗೆ ನೀವು ! ಮತ್ತ ನಿಮ ಕೆಳಗೆ ಭೂಮಿ. ಹೀಗಿರಬಹುದು. ಅಲ್ಲವೆ ?

**ಇಂದ್ರ:**— ನಾನು ಹೇಳಿದ್ದಾದರೂ ಹಾಗೆಯೇ. ಅಲ್ಲವೇ ಹುಚ್ಚಾ.

**ನಾರದಃ** — ಸರಿ ಹಾಗಾದರೆ ಕೂಡಿದಂತಾಯಿತು.

**ಇಂದ್ರ:**— ಏನು ಕೂಡಿದಂತಾಯಿತು ?

**ನಾರದ:**— ನಿಮ್ಮ ನಿದ್ರೆಯು ನನ್ನ ನಿದ್ರೆಯಕಿಂತಲೂ ತೀರ ವಿಪರೀತವಾಗಿದೆ.

**ಇಂದ್ರ:**— ಅದು ಹೇಗೆ ?

**ನಾರದಃ**— ಅದು ಹೇಗಂದರೆ ? ಇವರ ಮನೆಯ ಸೇವಕನಾದ ಕುಂಬಳ್ಯಾ ಮತ್ತು ನಾನು ರಾತ್ರಿಯಲ್ಲಿ ಕಟ್ಟೆಯ ಮೇಲೆ ಒಂದೇ ಗಾದಿಯ ಮೇಲೆ ಮಲಗುತ್ತೇವೆ ಮತ್ತು ಬೆಳಗಾದ ಮೇಲೆ ಎದ್ದು ನೋಡುತ್ತೇನೆ ನೆಲದ ಮೇಲೆ ಕುಂಬಳ್ಯಾ, ಕುಂಬಳ್ಯಾನ ಮೇಲೆ ಗಾದಿ ! ಮತ್ತು ಗಾದಿಯ ಮೇಲೆ ನಾನು ! ಹೀಗಾಯಿತು. ಇದಲ್ಲದೇ ಕುಂಬಳ್ಯಾನು ಗಾದಿಯ ಮೇಲೆ ! ಗಾದಿಯು ಎರಡನೇ ಅಂತಸ್ಥಿನ ಮೇಲೆ ! ಮತ್ತು ನಾನು ಮೂರನೇ ಅಂತಸ್ಥಿನ ಮೇಲೆ ! ಹೀಗೆ ಚಮತ್ಕಾರವಾಯಿತು. ನನಗೆ ಹೀಗಾಗುವದಕ್ಕೆ ಕಾರಣವೇನಂದರೆ ? ಗಾದಿಯು ನಿದ್ರೆಯಲ್ಲಿ ಎರಡನೇ ಅಂತಸ್ತಿನ ವರೆಗೆ, ನನ್ನ ಜತೆಯಲ್ಲಿ ಬಂತು. ಮೂರನೇ ಅಂತಸ್ತಿಗೆ ಬರಲಿಲ್ಲ. ಇದರ ಕಾರಣವೇನಂದರೇ ? ಎರಡನೇ ಅಂತಸ್ತಿನ ಸೋಪಾನ ದ್ವಾರವು ಮೂರನೇ ಅಂತಸ್ತಿನ ಸೋಪಾನ ದ್ವಾರಕ್ಕಿಂತ ಚಿಕ್ಕದಾಗಿರಬಹುದು.

**ಇಂದ್ರಃ**— ಎಲೋ ಮೂರ್ಖಾ ! ನಾನು ಸೋಪಾನದ ದ್ವಾರವು ಚಿಕ್ಕದಿರುವದೋ ? ದೊಡ್ಡದಿರುವದೋ ? ಇವನ್ನು ವಿಚಾರಿಸುವದಿಲ್ಲ. ನನಗೆ ಹೀಗಾಗುವದಕ್ಕೆ ಕಾರಣವೇನೆಂದು ವಿಚಾರಿಸಿದೆನು.

**ನಾರದ**:—ಓಹೋ ! ಅವರಬಗ್ಗೆ ನಾನು ತರ್ಕಿಸುವದೇನಂದರೆ, ಈ ಮನೆಯೊಳಗಿನ ಗಾದಿಗಳು ಚಂಡಿನಂತೆ ಪುಟಿದಾಡುತ್ತಿರಬಹುದು. ನಾವು ಅವುಗಳಮೇಲೆ ಮಲಗಿದ ಕೂಡಲೇ, ಅವುಗಳಿಗೆ ಸ್ಫುರಣಬರುತ್ತಿರಬಹುದು. ನಾನು ಸಲ್ಪ ಹಗುರಾಗಿರುವದರಿಂದ ಗಾದಿಯ ಸಂಗಡ ಮೇಲೆ ಹೋಗುತ್ತೇನೆ. ತಾವು ವಿಶೇಷ ಜಡವಾಗಿರುವದರಿಂದ ಕೆಳಗೆ ಬೀಳುತ್ತೀರಿ. ಇಷ್ಟೇ ಮತ್ತೇನು ?

**ಇಂದ್ರ**:— ಮೂರ್ಖಾ! ಇನ್ನು ಮೇಲೆ ಈ ನಿನ್ನ ತರ್ಕಜ್ಞಾನವನ್ನು ಕೇಳಿ, ಅಳಬೇಕೋ ? ಅಥವಾ ನಗಬೇಕೋ ?

**ನಾರದ**:— ಗಾದಿಯ ಸಂಗಡ ಮೇಲೆ ಹೋಗುವವರು ನಗಬೇಕು. ಮತ್ತು ನೆಲಕ್ಕೆ ಬೀಳುವವರು ಅಳಬೇಕು.

**ಇಂದ್ರ**:— ಒಳ್ಳೇದು ನಿನ್ನ ಅಭಿಪ್ರಾಯದಂತೆ ಗಾದಿಗಳು ಹಾರಾಡುತ್ತಿರಬಹುದು. ಹೀಗೆ ಅನ್ನೋಣ.

**ನಾರದ**:— ಅಲ್ಲದೇ. ತಮ್ಮ ಅಭಿಪ್ರಾಯದಂತೆ ನಾವೇ ಹೊರಳಾಡುತ್ತೇವೆ. ಹೀಗೆ ತಿಳಿಯೋಣ.

**ಇಂದ್ರ**:-- ಅದು ಹೇಗೂ ಇರಲಿ. ಮುಂದೆ ಇದಕ್ಕೆ ಉಪಾಯವೇನು ?

**ನಾರದ**:— ಓಹೋ ಉಪಾಯಕ್ಕೇನು ಕಡಿಮೆ ? ಹೀಗೆ ಮಾಡಿರಿ. ಈ ಹೊತ್ತು ಆ ಮಹಲಿನಲ್ಲಿ ಮಹಾನಂದೆಯ ಬದಲಾಗಿ ನನಗೆ ಮಲಗುವದಕ್ಕೆ ಅಪ್ಪಣೆಯಾಗಲಿ.

**ಇಂದ್ರ**:— ಅಂದರೆ ಹೇಗಾಗುವದು.

**ನಾರದ**:— ಅಂದರೆ! ನಿದ್ರೆಯಲ್ಲಿ ನಿಮ್ಮ ಹೊರಳಾಡುವ ವೇಗವು ಅಧೋಮುಖವಾಗುವದು. ಮತ್ತು ನನ್ನ ವೇಗವು ಊರ್ಧ್ವಮುಖವಾಗಿ ಹೊರಳಾಡುತ್ತಾ ಹೊರಳಾಡುತ್ತಾ, ಮಧ್ಯ ಮಾರ್ಗದಲ್ಲಿ ಟಕ್ಕರವಾಗು

ವದು. ಆದರ ಯೋಗದಿಂದ ನಾನು ಮೇಲೆ ಹೋಗುವದಿಲ್ಲಾ. ಮತ್ತು ನೀವು ಕೆಳಗೆ ಬೀಳುವದಿಲ್ಲ.

**ಇಂದ್ರ**:— ನಾರ್ಯಾ. ನೀನು ತೀರಾ ಮೂರ್ಖನಿರುತ್ತೀ. ಇದನ್ನು ಸಿದ್ಧಮಾಡುವದಕ್ಕೆ ನಾನು ಇಷ್ಟೊಂದು ಹಣವನ್ನು ವೆಚ್ಚಮಾಡಿದ್ದೆಲ್ಲಾ !

**ನಾರದ**:— ಇದರಲ್ಲಿ ಸಂಶಯವೇನು ? ನಾಯಿಕಸಾನಿಯ ಮನೆಗೆ ಹೋಗುವ ಜನಗಳಲ್ಲಿ ದೊಡ್ಡಕತ್ತೆಯಾವದು ?

**ಇಂದ್ರ**:— ಒಳ್ಳೇದು ಹೋಗು. ಮಹಾನಂದೆಯನ್ನು ಕರದು ಕೊಂಡು ಬಾ.

**ನಾರದ**:— ಧಣಿಯರೆ ಏತಕ್ಕೋಸ್ಕರ ?

**ಇಂದ್ರ**:— ಅವಳನ್ನು ನನ್ನ ಮನೆಗೆ ಕರೆದುಕೊಂಡು ಹೋಗಬೇಕಾಗಿದೆ.

**ನಾರದ**:— ಧಣಿಯರೇ, ತಮ್ಮ ಮನೆ ಎಲ್ಲಿರುವದು ?

**ಇಂದ್ರ**:— ಅದನ್ನು ತಕ್ಕೊಂಡು ನೀನೇನು ಮಾಡತಕ್ಕದ್ದದೆ. ನನ್ನ ಮನೆಯು ಸ್ವರ್ಗದಲ್ಲಿದೆ.

**ನಾರದ**:— ಅಂದರೆ, ನೀವಿನ್ನು ಸ್ವರ್ಗಕ್ಕೆ ಹೋಗತಕ್ಕವರೋ ? ಅಲ್ಲಿಗೆ ಮಹಾನಂದೆಯನ್ನು ಕರದುಕೊಂಡು ಹೋಗುವಿರಾ ?

**ಇಂದ್ರ**:— ಹೌದು. ಅವಳ ಜತೆಗೆ ನಿನ್ನನ್ನೂ ಕರಡೊಯ್ಯುವೆನು.

**ನಾರದ**:— ಛಿ. ಛೀ. ಅವಳ ತಾಯಿಯು ಅವಳನ್ನು ಇಷ್ಟರಲ್ಲೇ ಸ್ವರ್ಗಕ್ಕೆ ಹೋಗಗೊಡಲಿಕ್ಕಿಲ್ಲಾ. ಮತ್ತು ನಾನಾದರೂ ಬರುವದಕ್ಕೆ ಸಮ್ಮತಿಸುವದಿಲ್ಲ. ಬೇಕಾದರೆ ನೀವೇ ಹೋಗಿರಿ. ಆದರೆ ನಮ್ಮ ತಂದೆ ತಾಯಿಗಳಿಗೆ, ನಾರ್ಯಾ ಮತ್ತು ತುಂಬ್ಯಾ ಇವರು ಸುಖದಿಂದ ಇರುವರೆಂದು ಹೇಳಿರಿ.

**ಇಂದ್ರ:**— ನೀನು ಮತ್ತೆ ತರ್ಕಮಾಡುವದಕ್ಕೆ ಪ್ರಾರಂಭಿಸಿದಿಯಾ? ನಾನು ಹೇಳಿದ್ದನ್ನು ಮಾಡುವದು. ಕೇಳಿದಷ್ಟು ಉತ್ತರ ಕೊಡುವದು. ಕುಂಬಾರನಿಗಿಂತಲೂ ಹೆಚ್ಚಾದ ಕತ್ತೆಯ ಜಾಣತನವು ನನಗೆ ಬೇಕಾಗಿಲ್ಲ.

**ನಾರದ:**— ಇದೋ ಸುಮ್ಮನಾದೆ.

**ಇಂದ್ರ:**— ಮೆಲ್ಲನೇ ಹೋಗು. ಮಹಾನಂದೆಯನ್ನು ಕರೆದು ಕೊಂಡು ಬಾ.

**ನಾರದ:**— ಅಂದರೆ ಅವರು ಏತಕ್ಕೆಂದು ಕೇಳಿದರೆ ಏನು ಹೇಳ ಬೇಕು?

**ಇಂದ್ರ:**— ಏನೋ ಮಹತ್ವದ ಕೆಲಸವಿರುವದೆಂದು ಹೇಳು.

**ನಾರದ:** — ಮಹತ್ವದ ಕೆಲಸ ಏನೆಂದು ಕೇಳಿದರೆ? ತಾವು ಸ್ವರ್ಗಕ್ಕೆ ಹೋಗುವ ವ್ಯವಸ್ಥೆಯಲ್ಲಿರುವಿರಿ. ಅದಕ್ಕೆ ಭೆಟ್ಟಿಯಾಗುವದಕ್ಕೆಂದು ಹೇಳಲೋ?

**ಇಂದ್ರ:**— ಮೂರ್ಖಾ. ಇನ್ನು ಹೆಚ್ಚು ಬಡಬಡಿಸುವದಕ್ಕೆ ಪ್ರಾರಂಭಿಸಿದರೆ ಚನ್ನಾಗಿ ಒದೆಗಳು ಬಿದ್ದಾವು. ನಡೆ.

**ನಾರದ:**— ಹೂಂ! ಹೂಂ! ಒದೆಗಳು ಬಿದ್ದಾವೋ? ನಾನು ತಮ್ಮ ಕೆಲಸವಾಗಬೇಕು. ಮತ್ತು ಓಡ್ಯಾಡುವ ಶ್ರಮವು ಕಡಿಮೆಯಾಗ ಬೇಕೆಂದು ಪ್ರಯತ್ನ ಮಾಡಿದೆ. ಆದರೆ ಅದನ್ನು ನೀವೆಲ್ಲಿ ಕೇಳುತ್ತೀರಿ. ಇನ್ನೂ ಮಹಾನಂದೆಯ ನಖವು ಸಹಾ ದೃಷ್ಟಿಗೆ ಬಿದ್ದಿಲ್ಲ. ಈಗಲೇ ಹೀಗೆ?

**ಇಂದ್ರ:**— ಎಲೋ, ನಿನ್ನ ತಲೆ ತಿರುಗಿರುವದೇನು?

**ನಾರದ:**— ಹಾ. ಧಣಿಯರೇ ಸರಿಯಾಗಿರುತ್ತಿರುವದಲ್ಲ.

**ಇಂದ್ರ:**— ನಖವು ಸಹಾ ದೃಷ್ಟಿಗೆ ಬೀಳಲಿಲ್ಲವೆಂದು ಇದನ್ನೇನು ಬೊಗಳುತ್ತಿ. ಇದೇ ಈಗ ನಾನು ಮತ್ತು ಮಹಾನಂದೆಯು ಮಾತನಾಡುತ್ತಾ ಕುಳಿತಿದ್ದಿಲ್ಲವೇ?

**ನಾರದ:**— ನೀವು ಯಾರ ಕೂಡ ಮಾತನಾಡುತ್ತ ಕುಳಿತಿದ್ದಿರೋ ಅವಳನ್ನು ಕರದು ಕೊಂಡು ಬರಬೇಕೋ? ಈಗಲೇ ಕರತರುತ್ತೇನೆ.

**ಇಂದ್ರ:**— ಎಲೋ ಮೂರ್ಖಾ. ಎಲ್ಲಾ್ಯದರೂ ಆ ವಿಶ್ವಮೋಹಿನಿಯನ್ನು ಕರದುಕೊಂಡು ಬರುವಿ ಮತ್ತೆ.

**ನಾರದ:**— ಛೀ. ಛೀ. ಅವಳಲ್ಲ. ತಾವು ಯಾರಿಗೆ ಮಹಾನಂದೆಯೆಂದು ತಿಳಿದಿರುವಿರೋ ಅವಳನ್ನು ಒಂದೇ ಸಾರೆ ಏಕೆ? ಹತ್ತು ಸಾರೆ ಕರೆದುಕೊಂಡು ಬರುವೆನು.

**ಇಂದ್ರ:**— ಎಲೋ ಸ್ವಲ್ಪ ನಿಲ್ಲು. ನೀನನ್ನುವದರ ಅರ್ಥವೇನು?

**ನಾರದ:**— ಅಂದರೆ? ಸಿಂಪಿಗೆ ಬೆಳ್ಳಿಯೆಂದು ತಿಳಿಯುವದು. ಹಗ್ಗಕ್ಕೆ ಸರ್ಪವೆಂದು ಅನ್ನುವದು. ಮೃಗಜಲಕ್ಕೆ ನದಿಯೆಂದು ತಿಳಿಯುವದು. ಸ್ವಲ್ಪದರಲ್ಲಿ ಹೇಳಬೇಕೆಂದರೆ? ಯಾವದು ಇಲ್ಲವೊ ಅದಕ್ಕೆ ಅದೆ. ಎಂದು ತಿಳಿಯುವದು.

**ಇಂದ್ರ:**— ಅಂದರೆ ಈಗಲೇ ಇಲ್ಲಿಂದ ಹೋದವಳು ಮಹಾನಂದೆಯಲ್ಲವೇನು?

**ನಾರದ:**— ಅಲ್ಲ. ಒಂದು ಸಾರೆಯಲ್ಲಾ. ಎರಡು ಸಾರೆಯಲ್ಲಾ ಹತ್ತು ಸಾರೆಯಲ್ಲಾ.

**ಇಂದ್ರ:**— ಹಾಗಾದರೆ ಅವಳು ಯಾರು?

**ನಾರದ:**— ಅವಳು ಸದಾನಂದೆಯು.

**ಇಂದ್ರ:**— ಇದೇನು ಮೋಸವಯ್ಯಾ?

**ನಾರದ:**— ಇದರಲ್ಲೇನು ಮೋಸವಿರುವದಯ್ಯಾ? ಮಹಾನಂದೆ ಎಂದರೆ ಕೂಡಲೇ ಅತ್ಯಾನಂದವನ್ನು ಕೊಡತಕ್ಕವಳು. ಮತ್ತು ಸದಾನಂದೆ ಎಂದರೆ ಸ್ವಲ್ಪವೇ ಆದರೂ ಯಾವಾಗಲೂ ಆನಂದವನ್ನು ಕೊಡತಕ್ಕವಳು. ಒಂದೇ ದಿವಸ ಅತ್ಯಾನಂದವಾಗುವದಕ್ಕಿಂತಲೂ ಸ್ವಲ್ಪ

ಆನಂದವಾದರೂ ಚಿಂತೆಯಿಲ್ಲ. ತಮಗೆ ಸದಾನಂದೆಯೇ ಯೋಗ್ಯಳು ಹೀಗೆ ಪ್ರೌಢವಿಚಾರ ಮಾಡಿ, ಅವರು ಮಹಾನಂದೆಯ ಬದಲಾಗಿ ತಮಗೆ ಸದಾನಂದೆಯನ್ನು ಅರ್ಪಿಸಿರುವರು.

**ಇಂದ್ರ**:— ಅವೇನೂ ಇಲ್ಲ; ಈಗಲೇ ಹೋಗು. ಮತ್ತು ನೀನು ಯಾವಳಿಗೆ ಮಹಾನಂದೆ ಎಂದು ಹೇಳುವೆಯೋ, ಅವಳನ್ನು ಕರೆದುಕೊಂಡು ಬಾ. ( ನಾರದ ಹೋಗುವನು. ) ಈ ತಾಯಿಮಕ್ಕಳು ಬಂದೇ ಸವನೆ ನನ್ನ ಸರ್ವಸ್ವವನ್ನು ಹರಣಮಾಡಿದರು. ಮತ್ತು ನಾನಾದರೂ ಏನೂ ತಿಳಿಯದ್ದರೆ ಇಲ್ಲದೆ ವ್ಯಾಘ್ರಚರ್ಮವನ್ನು ಸಹಾ ತೆಗೆದು ಕೊಡುತ್ತಿರುವೆನು. ಒಳ್ಳೇದು. ಇದಕ್ಕೆ ಪ್ರತಿಫಲವೇನು ? ನಾನು ಆ ಸುಂದರಿಯ ಕೂಡ ಕೆಲವು ಹೊತ್ತು ಮಾಡಿದ ಶೃಂಗಾರ ಭಾಷಣವು ! ಅವಳು ನನಗೆ ಕೊಟ್ಟ ತಾಂಬೂಲ ಭಕ್ಷಣವು ! ಕೂಡಲೆ ನನಗೆ ಗಾಢ ನಿದ್ರೆ ಹತ್ತುವದು ! ಮತ್ತು ಬೆಳಗಾದ ಮೇಲೆ ಎಚ್ಚರಿಕೆ ? ಇದಲ್ಲದೆ ಈ ಹುಡುಗನು ಹೇಳುತ್ತಾನೆ ಆಕೆಯು ಮಹಾನಂದೆಯೇ ಅಲ್ಲವೆಂದು. ಇದೇನು ಗೌಡಜಂಗಾಲಿ ವಿದ್ಯೆಯೋ ಕಾಣೆ. ಈಗ ಅವಳು ಇಲ್ಲಿಗೆ ಬಂದಮೇಲೆ ಸರ್ವಸಂಶಯವು ದೂರವಾಗುವದು. ಆದರೆ ನಾನು ಪೂರ್ವದಲ್ಲಿ ಕಲ್ಪಿಸಿದಂತೆ ಮಹಾನಂದೆಯನ್ನು ವಶಮಾಡಿಕೊಳ್ಳುವ ಕಾರ್ಯವೇನೂ ಶುಲಭವಲ್ಲವೆಂಬದೇನೋ ನಿಜ.

**ನಾರದ**:— ಧಣಿಯರೇ, ಇದೋ ನೋಡಿರಿ. ಇವರೇ ಮಹಾನಂದಾದೇವಿಯವರು.

**ಇಂದ್ರ**:— ಅಹಹ! ಏನು ಈ ರೂಪಸೌಂದರ್ಯವು.

೧. ರಾಗ ದುರ್ಗಾ, ತಾಳ ತ್ರಿವಟ.

**ರನ್ನ ದಾ ಮೂರ್ತಿಯೊ। ಕಾಂತೆಯೋ। ಲಾವಣ್ಯದ ರಾಸಿ**
**ಯೋ। ಭುವನ ಮೋಹಿಪ ಮಾರನಾಸತಿಯೋ ಸೌಧಾ**
**ಮಿನಿಯೋ॥ ಧವಳ ಕ್ಷೀರಾಂಬೋಧಿಯಾ ಸುತೆಯೋ॥**
**ತಾರಾಪತಿಯೊ। ಯುವತೀ ಕುಲಮಣಿಯಳೋ।**
**ಭಾವಿಸೇ ತಿಳಿಯೇ ನಾನೀಪರಿ ॥೧॥**

**ನಾರದ:**— ಧಣಿಯರೇ, ಬಾಹ್ಯದೃಷ್ಟಿಯಿಂದ ಹೇಗೆ ಈ ಸ್ವರೂಪದ ವರ್ಣನೆಯನ್ನು ಮಾಡಿದಿರೋ, ಅದರಂತೆ ಅಂತಜ್ಞಾನದಿಂದ ಅವರ ಯೋಗ್ಯತೆಯನ್ನು ಪರೀಕ್ಷಿಸಿ, ಎರಡೂ ಕೈಜೋಡಿಸಿ ಸಾಷ್ಟಾಂಗ ನಮಸ್ಕಾರ ಹಾಕಿರಿ. ಅಂದರೆ ದೇವರ ಕೃಪೆಗೆ ಪಾತ್ರರಾದಂತೆ ಎಂದು ತಿಳಿಯಿರಿ.

**ಇಂದ್ರ:**— ನಾನು ಇವಳಿಗೋಸ್ಕರ ಇಷ್ಟೊಂದು ಸಂಪತ್ತಿಯನ್ನು ವೆಚ್ಚಮಾಡಿದ್ದು, ಇವಳನ್ನು ದೇವಿಯೆಂದು ತಿಳಿಯುವದಕ್ಕಲ್ಲ. ಇವಳ ಬೆಲೆಯನ್ನು ನಾನು ಮುಂಗಡವಾಗಿ ಕೊಟ್ಟಿರುವೆನು. ಇವಳು ಸಾಮೋಪಚಾರದಿಂದ ನನ್ನ ಸಂಗಡ ಬಂದರೆ ಸರಿ. ಇಲ್ಲದಿದ್ದರೆ ನಾನಿವಳನ್ನು ಬಲತ್ಕಾರದಿಂದ ಹರಣ ಮಾಡಿಕೊಂಡು ಹೋಗುತ್ತೇನೆ. ಯಾರನ್ನೂ ಕೇಳುವದಿಲ್ಲ.

**ನಾರದ:**— ಧಣಿಯರೇ, ಈ ರೂಪಸೌಂದರ್ಯವು ಸೂರ್ಯನಕ್ಕಿಂತಲೂ ತೇಜಃಪುಂಜವಾದದ್ದು ! ಅಗ್ನಿಯಕ್ಕಿಂತಲೂ ಪ್ರಖರವಾದದ್ದು ! ಕಾಲಕೂಟಕ್ಕಿಂತಿಲೂ ತೀಕ್ಷ್ಣವಾದದ್ದು ! ಮತ್ತು ಅಮೃತಕ್ಕಿಂತಲೂ ಮಧುರವಾದದ್ದು. ನೀವು ಕಪಟತನದಿಂದ ಇದನ್ನು ಕೈವಶಮಾಡಿಕೊಳ್ಳಲು ಯತ್ನಿಸಿದರೆ, ಅಗ್ನಿಯಂತೆ ನಿಮ್ಮ ಸರ್ವಾಂಗವು ಸುಟ್ಟು ಬೂದಿಯಾದೀತು.

**ಇಂದ್ರ:** — ವಿದುರ ನೀತಿಯ ಭಾಷಣವನ್ನು ಕೇಳಿ, ಬೆಕ್ಕು ಕದ್ದು ಹಾಲು ಕುಡಿಯುವದನ್ನು ಬಿಟ್ಟೀತೆ? ಅದರ ಸೊಂಟದ ಮೇಲೆ ಚನ್ನಾಗಿ ಪೆಟ್ಟುಗಳು ಬೀಳಲೇ ಬೇಕು. ಅದರಂತೆ ಯಾವ ಪದಾರ್ಥದ ಮೇಲೆ ತನ್ನ ಸ್ವಾಮಿತ್ವವೋ, ಅದರ ಮೇಲೆ ಮತ್ತೊಬ್ಬನು ಕಪಟತನದಿಂದ ಸ್ವಾಮಿತ್ವ ನಡಿಸಲಿಕ್ಕೆ ಪ್ರಯತ್ನಿಸಿದರೆ, ಅವನ ಕಾಲಿಗೆ ಬಿದ್ದು ಬೇಡಿಕೊಂಡರೆ ನಡೆಯಬಹುದೋ ? ಅದನ್ನು ಬಲಾತ್ಕಾರದಿಂದಲೇ ಹರಣಮಾಡಬೇಕು. ( ಎಂದು ಹೋಗಿ, ಅಯ್ಯೊ ಅಯ್ಯೊ ಎಂದು ಒದರುವನು. )

**ನಾರದ:**— ಏಕೆ ? ಧಣಿಯರೇ, ಏನಾಯಿತು ! ಕಾಲು ಒಳೆಯಿತೋ ಪಾಪ ! ಏಳಿರಿ. ನನ್ನ ಕೈಹಿಡಿಯಿರಿ.

ಇಂದ್ರ:—ಎಲೋ, ನನ್ನ ಮೈಗೆ ಕೈ ಹಚ್ಚಬೇಡಾ. ನಾರ್ಯಾ! ನನ್ನ ಕಣ್ಣುಗಳು ಸುಟ್ಟು ಹೋದವು ಹಾಯ! ಹಾಯ! ಇದೆಸೋ ನೋಡು, ನನ್ನ ಸರ್ವಾಂಗವು ಕೂಡಾ ಹುರಪಳಿಸಿ ಹೋಗಿದೆ. ಅಯ್ಯೋ.

ರಾಗ ಮಲ್ಹಾರ, ತಾಳ ಝಂಪಾ.

**ಮಂದನಾದೇ ದೇಹವು ತಾ। ಪೊಂದಿತೀಗ। ದುಃಖಮಯ ಸ್ಥಿತಿಯು ॥ ಪಲ್ಲ ॥ ಥರಥರಿಪುದೀಕಾಯ। ಉರಿಯುವದು ತಾಹೃದಯ। ಸುರಿಯುತಿದೆ ಶೊಂಬನಿಯು। ಶಿರಕಂಪಿಪುದು ॥**

**ನಾರದ:**— ಎಲಾ. ಎಲಾ. ಧಣಿಯರೇ ಈ ಮಹಾನಂದೆಯು, ತನ್ನ ಹೆಸರಿಗೆ ವಿರುದ್ಧವಾಗಿ ಎಂತಹ ಕೃತ್ಯವನ್ನು ಮಾಡಿದಳು. ಇವಳು ಮಹಾನಂದೆಯಲ್ಲಾ! ಮಾಯಾದೇವಿಯು.

ಇಂದ್ರ:— ನಾರ್ಯಾ! ಅವಳು ಇನ್ನೂ ಇರುವಳೋ? ಹೋದಳೊ?

ನಾರದ:— ಹೋದಳು. ಆಗಲೇ ಹೋದಳು! ( ಆತ್ಮಗತ ) ಭಲೇ! ಭಲೆ! ಆದಿಮಾಯೆ ಚನ್ನಾಗಿ ಮಾಡಿದೆ.

ಇಂದ್ರ:— ನಾರ್ಯಾ. ಅವಳು ಬಹುತರವಾಗಿ ಯಾವಳಾವರೂ ಅಲೌಕಿಕ ಸ್ತ್ರೀ ಇರಬಹುದು.

**ನಾರದ:**— ಧಣಿಯರೇ. ಅವಳು ಯಾರಾದರೂ ಮಂತ್ರಗಾರಳಿರ ಬಹುದು.

ಇಂದ್ರ:— ಇಂತಹ ಮಂತ್ರಕಾರರಿಗೆ ನಾನೇನು ಸೊಪ್ಪು ಹಾಕತಕ್ಕವನಲ್ಲ. ಇದೇನೊ ವಿಚಿತ್ರವಾಗಿ ತೋರುವದು.

ರಾಗ ಅಡಾಣ, ತಾಳ ಏಕ್ಕಾ.

**ಏನೀ ಕರ್ಮಗತೀ। ಎನಗಿಂಥಾ ಸ್ಥಿತಿಯೂ। ತಾನ್ಯೆದು ದೈಯ್ಯಾ ॥ ಪಲ್ಲ ॥**
**ಕಣ್ಗಳಿರಲು ಅಂಧನಾದೆ ॥ ಪೆಣ್ಮಣಿಗಾಗಿ ॥ ಪಣಿಯುನು ತುಳಿಯೆ ॥ ಅಗಿಯಾದೆ ಬಿಡಾದಿಪುದೇನ್ಯೆ ॥೧॥**

ನಾರ್ಯಾ ಇನ್ನ ಮೇಲೆ ನನ್ನದೊಂದು ಕೆಲಸವನ್ನು ಮಾಡು.

**ನಾರದ:**— ಧಣಿಯರೇ, ಮತ್ತೇನು ಉಳಿದಿರವದು? ಬಹುತರ ಎಲ್ಲ ಕೆಲಸಗಳೂ ಸರಿಯಾಗಿ ಆದಂತಾಗಿರುವದು?

**ಇಂದ್ರ:**— ನನ್ನನ್ನ ಯಾರೊಬ್ಬರಿಗೂ ತಿಳಿಸದಂತೆ ಊರ ಹೊರಗೆ ಕರೆದುಕೋಂಡು ಹೋಗಿ, ಒಂದು ನದಿಯಲ್ಲಿ ದಬ್ಬಿಕೊಡು.

**ನಾರದ:** — ಅಂದರೆ ಜಲಸಮಾಧಿಯೋ? ಸನ್ಯಾಸಾಶ್ರಮಕ್ಕಿಂತಲೂ ಮೊದಲೇ ? ಮಹತ್ಪಾಪ ! ಮಹತ್ಪಾಪ !

**ಇಂದ್ರ:**— ಇನ್ನು ಮೇಲೆ ಎಲ್ಲಿಯ ಪಾಪ! ಎಲ್ಲಿಯ ಪುಣ್ಯ ! ದೈವದಲ್ಲಿ ಇದ್ದದ್ದನ್ನು ಅನುಭವಿಸಲಿಕ್ಕೆ ಬೇಕು.

**ನಾರದ:**— ಮೊದಲು ಅಗ್ನಿಯಲ್ಲಿ ಮುಖವನ್ನಿಡುವದು, ಮತ್ತು ದೇವರ ಕಡಿಗೆ ಕೈಮಾಡಿ ತೋರಿಸುವದು.

ರಾಗ ಸಾರಂಗ, ತಾಳ ಕೇರವಾ.

**ತಾನುಗೈದುಕರ್ಮಕೆತಾನೇ। ಭೋಗಿಯಾಗಬೇಕೈ ||ಪಲ್ಲ||**
**ಹಸ್ತಪಾದಮಾಳ್ಪವುಕರ್ಮ || ಕರ್ತುಭೋಗಿಪುದಕಿಂದ್ರಿ**
**ಯಗಳ್ || ಮತ್ತೆ ಕಷ್ಟಸುಖತಾಬರಲು। ನಗುವದಳುವ**
**ದೇಕೇ ||೧|| ನಿನಗೆ ನಾನು ಸೌಖ್ಯವನಿತ್ತೇ। ಹೀನವಿ**
**ಧಿಯು ಕಷ್ಟವನಿತ್ತಾ। ಮನವು ಶಾಂತಿ ಇಲ್ಲದೆನೋಕ್ಕಾ**
**ತಾನೆ ದೊರೆವುದೇನೈ ||೨||**

## ಪ್ರವೇಶ ೨

---

**ಸ್ಥಳ:**— ( ಗಂಧರ್ವ ಗಾಯನ ಶಾಲಾ. )

( ಎಲ್ಲರೂ ಗಾಯನವಾದನದಲ್ಲಿ ನಿಮಗ್ನರಾಗಿರುವರು- )

**ಬ್ರಹ್ಮ:**— ಎಲೋ ! ಸ್ವಲ್ಪ ಮೆಲ್ಲನೆ ಬಾರಿಸಿರಿ. ಇದೇನು ಗಾ

ಯನ ಶಾಲೆಯೋ ? ಜಾತ್ರೆಯೋ ? ತುಂಬವರ್ಮಾ, ಸ್ವಲ್ಪ ಇತ್ತ ಬನ್ನಿರಿ. ನಿನ್ನಿನ ಕಚೇರಿಯಲ್ಲಿ ನೀವು ನಮ್ಮ ಗಾಯನ ಶಾಲೆಯ ತತ್ವವನ್ನೇ ಮರೆತು ಬಿಟ್ಟಿರಿ.

**ತುಂಬುರ**:— ಗುರುಗಳೇ ಅದೇನು ?

**ಬ್ರಹ್ಮ**:— ನಿಮಗೆ ಜನರು ಕಾನಡಾ ರಾಗ ಮಾಡುವದಕ್ಕೆ ಹೇಳಿದರು. ನೀವು " ಆದೌರಾಮ ತಪೋವನಾದಿ ಗಮನಂ " ಈ ಶ್ಲೋಕವನ್ನು ಕಾನಡ ರಾಗದಲ್ಲಿ ಅನ್ನುವದನ್ನು ಬಿಟ್ಟು, ಮೂಲ ಕೀರ್ತನೆಯನ್ನೇ ಹಾಡಿದಿರಿ. ಇದನ್ನು ತಪ್ಪು ಮಾಡಿದಿರಿ.

**ತುಂಬುರ**:— ಗುರುಗಳೇ, ನನಗೆ ರಾಗದಿಂದ ಶ್ಲೋಕವನ್ನು ಅನ್ನುವದಕ್ಕೆ ಬರುವದಿಲ್ಲ.

**ಬ್ರಹ್ಮ**:— ಅದರಲ್ಲೇನಿರುವದು ? ಮೂಲ ಕೀರ್ತನೆಯನ್ನು ಮನಸ್ಸಿನಲ್ಲಿ ತಂದು ಶ್ಲೋಕದಲ್ಲಿಯ ಶಬ್ದಗಳನ್ನು ಎಳದೆಳೆದು ಹಾಡಿದರಾಯಿತು. ಅಂದರೆ ಹೀಗೆ ನೀವು ಯಾವ ಕೀರ್ತನೆಯನ್ನು ಹಾಡಿದಿರಿ ?

**ತುಂಬುರ**:— " ತುಮಸೋಹಿ ಕರೀಮ ರಹೀಮ ಹಕೀಮ ಪಾಕಪರ ವರ್ದಿಗಾರ " ಇದನ್ನು ಹಾಡಿದೆನು.

**ಬ್ರಹ್ಮ**:— ಹಾ. ಸರಿ. ಈ ಕೀರ್ತನೆಯ ಸ್ವರಗಳನ್ನು ಧ್ಯಾನದಲ್ಲಿ ತಂದು, ರಾಗವನ್ನು ಮಾಡಬೇಕು. ಒಳ್ಳೇದು ಕೀರ್ತನೆಯನ್ನಾದರೂ ಹೇಳಿದಿರಿ. ಅದನ್ನು ಶಾಲೆಯೊಳಗಿನ ಹುಡುಗರು, " ಕೋಳಿಕೂಗದ ಮುನ್ನ ಏಳುವದು ನಿತ್ಯದಯಾಳು ದೇವರನೂ " ಎಂದು ಹೇಳುವಂತೆ ಸ್ಪಚ್ಛವಾಗಿ ಹೇಳಿದಿರಿ. ಅದನ್ನಾದರೂ ಗಾಯಕಜನರಂತೆ ಹೇಳಬೇಕಾಗಿತ್ತು.

**ತುಂಬುರ**:— ಗವಾಯಿ ಜನರಂತೆ ಅಂದರೆ ಹೇಗೆ ?

**ಬ್ರಹ್ಮ**:— ಗವಾಯಿ ಜನರಂತೆ ಅಂದರೆ ಪ್ರತಿಯೊಂದು ಶಬ್ದದ ಮೊದಲಿನ ಅಕ್ಷರವನ್ನು ಸ್ಪಚ್ಛವಾಗಿ ಉಚ್ಚರಿಸಬೇಕು. ನುತ್ತೆ ಉಳಿದ ಸರ್ವ

ಅಕ್ಷರಗಳ ಬದಲಾಗಿ “ ಅ ” ಎಂದು ಅನ್ನಬೇಕು. “ ತುಮುಷೋಹಿ ಕರೀಮು ರಹೀಮು ಹಕೀಮು ಪಾಕ ಪರವರ್ದಿಗಾರ ” ಈ ಶಬ್ದಗಳನ್ನುಗವಾಯಿಜನರಂತೆ ಅನ್ನಬೇಕು. ಅಂದರೆ ತಾವು ಹಾಡುವಾಗ್ಗೆ ಅನ್ಯರಿಗೆ ಬರೆದುಕೊಳ್ಳಲಿಕ್ಕೆ ಬರಬಾರದು.

**ತುಂಬುರ:—** ಜನರು ಬರೆದುಕೊಂಡರೆ ತಮ್ಮ ಕೀರ್ತನೆಗಳಿಗೆ ಏನು ಕಡಿಮೆಯಾಗಬೇಕಾಗಿದೆ ?

**ಬ್ರಹ್ಮ:—** ನೀವು ಇಲ್ಲಿಯೇ ತಪ್ಪುವಿರಿ. ಗವಯಿ ಜನರು ಸತ್ತಮೇಲೆ, ತಮ್ಮ ಕೀರ್ತನೆಗಳನ್ನು ತಮ್ಮ ಜೊತೆಯಲ್ಲಿ ಸ್ವರ್ಗಕ್ಕೆ ತಕ್ಕೊಂಡು ಹೋಗಬೇಕು. ಅಂದರೇನೆ ಅವರಿಗೆ ಇಂದ್ರನ ಸಭೆಯಲ್ಲಿ ಗಂಧರ್ವನಸ್ಥಳವು ದೊರೆಯುವದು. ಒಳ್ಳೇದು ಇದನ್ನು ಚನ್ನಾಗಿ ಲಕ್ಷ್ಯದಲ್ಲಿಡಿರಿ. ಮೊದಲು ಕಾಲೊಳಗಿನ ಗೆಜ್ಜೆಯನ್ನು ಕಟ್ಟಿರಿ. ನಾನು ನಿಮಗೊಂದು ಸೊಗಸಾದ ಗತ್ತನ್ನು ಕಲಿಸುತ್ತೇನೆ. ಈಗ ಮೊನ್ನೆ ಕಲಿಸಿದಂತೆ ಹೆಜ್ಜೆಗಳನ್ನು ಹಾಕಿರಿ ನೋಡೋಣ. ( ತುಂಬುರ ಹೆಜ್ಜೆ ಹಾಕುವನು. ಬ್ರಹ್ಮ. ತಾಳ ಹಿಡಿಯುವನು. ) ಒಂದು ! ಎರಡ ! ಮೂರ ! ಚಾರ ! ಚು ಚು ಚುಂ ಭಾ ! ಚು ಚು ಚುಂ ಭಾ ! ಚು ಚು ಚುಂ ಭಾ ! ಇನ್ನು ನಿಮಗೆ ವೃಕ್ಷಲತಾಲಿಂಗನ್ಯಾಸವನ್ನು ಕಲಿಸುತ್ತೇನೆ.

**ತುಂಬುರ:—** ಎಂತಹ ನ್ಯಾಸವು ?

**ಬ್ರಹ್ಮ:—** ವೃಕ್ಷಲತಾಲಿಂಗನ್ಯಾಸ.

**ತುಂಬುರ:—** ವೃಕ್ಷಲತಾಲಿಂಗನ್ಯಾಸವೆಂದರೆ ?

**ಬ್ರಹ್ಮ:—** ವೃಕ್ಷಲತಾಲಿಂಗನ್ಯಾಸವೆಂದರೆ ? ವೃಕ್ಷಕ್ಕೆ ಹೇಗೆ ಬಳ್ಳಿಯು ಹಬ್ಬುವದೋ ? ಅದರಂತೆ ನೃತ್ಯದಲ್ಲಿ ಒಂದು ಪ್ರಕಾರವಿರುವದು. ನಾನು ಇಲ್ಲಿ ಹೀಗೆ ನಿಂತು ಕೊಳ್ಳುತ್ತೇನೆ. ನೀವು ಅಲ್ಲಿಂದಲೇ ನಾನು ಈಗಲೇ ತೋರಿಸಿದಂತೆ ಹೆಜ್ಜೆಗಳನ್ನು ಹಾಕುತ್ತಾ ಒಂದು, ಎರಡು ಮೂರು, ನಾಲ್ಕು; ಅನ್ನುತ್ತಾ ನನ್ನ ಸಮೀಪಕ್ಕೆ ಬರಬೇಕು. ಮೊದಲು ಚು ಚು ಚುಂ ಭಾ ಅಂದು ನಿಮ್ಮ ಬಲಗೈಯನ್ನು ನನ್ನ ಬಲಗಡೆಯ ಟೊಂಕದ ಮೇಲೆ ಇರಿಸಬೇಕು. ಎರಡನೇ ಚು ಚು ಚುಂ ಭಾ ಎಂದು ನನ್ನ ಎಡ

ಕೈಯನ್ನು ನಿಮ್ಮ ಎಡಗಡೆಯು ಟೊಂಕದ ಮೇಲೆ ಇರಿಸಬೇಕು. ಮೂರನೇ ಚು ಚು ಚುಂ ಛಾ ಅಂದು ನಿಮ್ಮ ಬಲಗಡೆಯ ಮತ್ತು ನನ್ನ ಎಡಗಡೆಯು ಪಾದಗಳನ್ನು ನಿಟ್ಟಿಸಿಕೊಂಡಿರಬೇಕು. ಆಮೇಲೆ ನಾವೀರ್ವರು ಸೇರಿ ಸರಿಯಾಗಿ 'ಒಂದು, ಎರಡು, ಮೂರು, ನಾಲ್ಕು,' 'ಒಂದು ಎರಡು ಮೂರು ನಾಲ್ಕು' ಚು ಚು ಚುಂ ಛಾ, ಚು ಚು ಚುಂ ಛಾ, ಚು ಚು ಚುಂ ಛಾ! ಹೀಗೆ ಮಾಡುವದಕ್ಕೆ ಪ್ರಾರಂಭಿಸಬೇಕು.

**ತುಂಬರ**:—ನನಗೆ ನಿಮ್ಮ ವೃಕ್ಷಲತಾಲಿಂಗನ್ಯಾಸವೂ ಬೇಡಾ; ಕಲಿಯುವದೂ ಬೇಡಾ, ನಿಮ್ಮನ್ನು ಜತೆಯಲ್ಲಿ ಕರೆದುಕೊಂಡು ನರ್ತನ ಮಾಡುವದೂ ಬೇಡಾ.

**ಬ್ರಹ್ಮ**:—ನಿಮಗೆ ಏನೂ ತಿಳಿಯುವದಿಲ್ಲ. ಪುರುಷರೂ ಸ್ತ್ರೀಯರೂ-ಕೈಯಲ್ಲಿ ಕೈ-ಕಾಲೊಳಗೆ ಕಾಲು-ಹಾಕುತ್ತಾ ನರ್ತನ ಮಾಡುವದು ಕೌಶಲ್ಯದೃಷ್ಟಿಯಿಂದ ಮಹತ್ವದ ವಿಷಯವಿರುವದು. ತಾಂಡವ ನೃತ್ಯದ ಕಾಲಕ್ಕೆ, ಮಹದೇವರು ಅರ್ಧನಾರೀ ನಟೇಶ್ವರನ ರೂಪವನ್ನು ಧಾರಣ ಮಾಡುತ್ತಾರೆ. ಅದರ ತತ್ವವಾದರೂ ಇದೇ!

**ತುಂಬರ**:—ಜನರ ತತ್ವವನ್ನು ತೆಗೆದುಕೊಂಡು ನನಗೇನು ಮಾಡಬೇಕಾಗಿದೆ. ನನಗೆ ನನ್ನ ತತ್ವವೇ ಶ್ರೇಷ್ಟವಾದದ್ದು!

**ಬ್ರಹ್ಮ**:—ಕ್ಷುಲ್ಲಕವಾದ ವಿಷಯದಲ್ಲಿ ಸುಮ್ಮನೇ ವಾದವನ್ನು ಬೆಳಿಸಬಾರದು. ತಮಗೆ ಸಧ್ಯಮಾಡತಕ್ಕದ್ದೇನು? ಮತ್ತು ಅದಕ್ಕೆ ಸಾಧನಗಳು ಏನುಬೇಕು? ಇದರ ಕಡೆಗೆ ಯಾವಾಗಲೂ ದೃಷ್ಟಿ ಇಡಬೇಕು. ನಡೆಯಿರಿ ನೃತ್ಯವನ್ನು ಪ್ರಾರಂಭಿಸಬೇಕು. ನಾನು ತಾಳವನ್ನು ಹಿಡಿಯುತ್ತೇನೆ. ನೀವು ಹೆಜ್ಜೆಗಳನ್ನು ಹಾಕಿರಿ. ಒಂದು! ಎರಡು! ಮೂರು! ನಾಲ್ಕು!

**ತುಂಬರ**:—ನಾನು ಎಂದಿಗೂ ಬರುವದಿಲ್ಲ.

**ಬ್ರಹ್ಮ**:—ನೀವು ಸಾಮೋಪಾಯದಿಂದ ಮನುಷ್ಯರಂತೆ ಕಲಿಯ

ದಿದ್ದರೆ, ನನಗಾದರೂ ಕೈಯಲ್ಲಿ ಕೊರಡೆಯನ್ನು ತಕ್ಕೊಂಡು ಕುದುರೆಗೆ ಕಲಿಸಿದಂತೆ ಆಲಿಸಬೇಕಾಗುವದು!

**ತುಂಬರ:**—ಆಮೇಲೆ ನನಗಾದರೂ ಅದರ ಪ್ರತಿಕಾರಾರ್ಥವಾಗಿ ಹಿಂಗಾಲಿನ ಪ್ರತಾಪವನ್ನು ತೋರಿಸಬೇಕಾಗುವದು.

**ಬ್ರಹ್ಮ:**—ಒಳ್ಳೇದು ನೋಡೋಣ. ಇದರ ಪರೀಕ್ಷೆಯನ್ನು ಮಾಡಿಯೇ ಬಿಡುತ್ತೇನೆ. ಹಾ: ಒಂದು ಎರಡು ಮೂರು ನಾಲ್ಕು! (ತುಂಬರ ಒಳಗೆ ಹೋಗುವಳು ಮತ್ತು ಕುದುರೆಯು ರೂಪದಿಂದ ಬಂದು ಬ್ರಹ್ಮಾನಂದನನ್ನು ಒದ್ದು ಕಚ್ಚಿ ಕೆಡಹುವಳು.)

## ಪ್ರವೇಶ ೪.

---

### ಸ್ಥಳ:—(ಮಹಲು)

(ಮಹಾನಂದೆಯು ವಿಚಾರಮಾಡುತ್ತಾ, ಕುಳಿತಿರುವಳು)

**ವಿಶ್ವ:**—ಪ್ರಿಯಬಾಲೇ! ನಿನ್ನೊಳಗೆ ನೀನು ಏನು ವಿಚಾರ ಮಾಡುತ್ತಿ? ನಿನ್ನ ಮೈತ್ರಿಣಿಯು ಎಲ್ಲಿ? ಕಾಣಿಸುವದಿಲ್ಲ?

**ಮಹಾ:**—ಅವಳು ಅಣ್ಣನಾದ ಬ್ರಹ್ಮಾನಂದನ ಗಾಯನ ಶಾಲೆಗೆ ಹೋಗಿರುವಳು. ಅಮ್ಮಾ! ಅವಳು ನಿಜವಾಗಿಯೂ, ಒಂದು ಕ್ಷಣ ಹೊತ್ತಾದರೂ ನನ್ನ ಹತ್ತರ ಇಲ್ಲದೆ ಇದ್ದರೆ, ನನಗೆ ಏನೊ ತಪ್ಪಿಸಿ ಕೊಂಡಂತೆ ಆಗುತ್ತದೆ. ಅವಳಂಥ ಗೆಳತಿಯು ನನಗೆ ಈ ಜಗತ್ತಿನಲ್ಲಿ ಎಲ್ಲಿಯೂ ಎಂದೂ ದೊರೆಯಲಿಕ್ಕಿಲ್ಲ.

**ವಿಶ್ವ:**—ಸುಖವೆಂದರೇನು? ಮತ್ತು ಅದನ್ನು ತರುಣ ಸ್ತ್ರಿಯರಿಗೆ ಕೊಡುವಂಥ ಮಿತ್ರರಾರು? ಇದು ನಿನಗೆ ತಿಳಿಯದು. ಅಂತೇ ನೀನು ಹೀಗೆ ಮಾತನಾಡುತ್ತಿ. ಅದಕ್ಕೋಸ್ಕರವೇ ನಾನು ಹಗಲು ರಾತ್ರಿ ನಿನ್ನ ಮುಂದೆ ಕಂಠಶೋಷ ಮಾಡಿಕೊಳ್ಳುತ್ತೇನೆ. ನೀನು ಇನ್ನೂ ಚಿಕ್ಕವಳಲ್ಲ. ನೀನು ಇನ್ನು ಮೇಲೆ ಬಾಲ ಮೈತ್ರಿಣಿಯರ ಸಹವಾಸ

ವನ್ನು ಬಿಟ್ಟು, ಸುಖವು ದೊರೆಯುವಂಥ ತರುಣ ಮಿತ್ರರ ಸಹವಾಸ ವನ್ನು ಮಾಡು.

**ಮಹಾ**:—ಏಕೆ? ಅದಕ್ಕೆ ನಾನು ಸಮ್ಮತಿಸುವದಿಲ್ಲವೇನು?

**ವಿಶ್ವ**:—ಏನಾದರೊಂದು ವಿಲಕ್ಷಣವಾದ ಪಂಥವನ್ನುಮಾಡೋಣ ವೆಂದರೆ, ಪರಿಯಾಯದಿಂದ ನಿರಾಕರಣೆಯೇ! ಅದಕ್ಕೆ ಯಾರೂ ಸಮ್ಮತಿ ಎಂದು ಅನ್ನುವದಿಲ್ಲ. ಪೃಥ್ವಿಗೆ ಸರಿಯಾದ ಬೆಲೆಯುಳ್ಳ ಕಂಕಣವನ್ನು ತಕ್ಕೊಂಡು, ನಿನ್ನಗೋಸ್ಕರ ಸ್ವರ್ಗದಲ್ಲಿಯು ಯಾವ ದೇವತಾಪುರುಷನು ಬರುವನೋ ಏನೋ ಕಾಣೆ!

**ಮಹಾ**:—ಅಮ್ಮಾ! ನಾನು ರಂಭಾ ಊರ್ವಸಿಯರಂತೆ ಕಾಣಿಸು ವೆನೆಂದು ನೀನೇ ಅನ್ನುತ್ತಿದ್ದಿಲ್ಲವೇ? ಅಂದ ಮೇಲೆ ಇಂಥಾ ಊರ್ವಸಿಗೆ ಸುಖವನ್ನು ಕೊಡುವದಕ್ಕೆ ಯಾವನಾದರೂ ವಿಕ್ರಮಾದಿತ್ಯನಂಥವನು ಬೇಡವೇ?

**ವಿಶ್ವ**:—ಏನೇ ಹೊತ್ತಿಗೆ ಬಾಳೆಹಣ್ಣು! ವನವಾಸಕ್ಕೆ ಸೀತಾ ಫಲವು! ಹೀಗೆ ನೀನು ಅನ್ನುತ್ತಿ. ಆದರೆ ಅದು ದೊರೆಯದಿದ್ದರೆ ಅದ ಕ್ಕೋಸ್ಕರ ಕಾದುಕೊಂಡು ಕೂಡಬೇಕೇನು? ನಮಗೆ ಹೇಗಾದರೂ ಮಾಡಿ ಕಾಮದೇವನ ಮಂದಿರವನ್ನು ನಿಲ್ಲಿಸಬೇಕಾಗಿದೆ. ಒಬ್ಬನಿಂದ ಸಂಪಾದನೆ ಮಾಡಿದರೇನು? ಹತ್ತು ಜನರಿಂದ ಸಂಪಾದನೆ ಮಾಡಿದ ರೇನು? ಎಲ್ಲಾ ಒಂದೇ.

**ಮಹಾ**:—ಅಮ್ಮಾ: ಚಾತಕಪಕ್ಷಿಯು ನೀರಡಿಕೆಯಿಂದ ಎಷ್ಟು ಬಾಧೆಪಟ್ಟರೂ, ಅದು ವರ್ಷಾಕಾಲದ ಮಾರ್ಗವನ್ನೇ ನಿರೀಕ್ಷಣೆ ಮಾಡುತ್ತಾ, ಮೇಘಬಿಂದುಗಳ ಅಪೇಕ್ಷೆಯನ್ನೆ ಮಾಡುವದಲ್ಲದೇ, ಕಾಗಿಯಂತೇ ಎಂದಾದರೂ ಮಲಿನ ನೀರನ್ನು ಕುಡಿಯಬಹುದೇ? ಅದರಂತೆ ಶ್ರೀ ಮಹಾದೇವನ ವರಪ್ರಸಾದದಿಂದ ಜನ್ಮ ತಾಳಿದ ಈ ಗಣಿಕೆಯು, ಪೃಥ್ವಿಗೆ ಸರಿಯಾದ ಬೆಲೆಯುಳ್ಳ ಕಂಕಣವನ್ನು ಯಾವನು ತಂದು ಕೊಡುವನೋ, ಅವನಿಗೋಸ್ಕರವೇ, ತನ್ನ ತಾರುಣ್ಯವನ್ನು

ವೆಚ್ಚ ಮಾಡುವಳು. ಅಲ್ಲದೇ ಬೀದಿಯಲ್ಲಿರುವ ಸೂಳೆಯರಂತೆ, ಕಾಮುಕ ಜನರ ಕಾಮವಾಸನೆಗೆ ಎಂದೂ ಬಲಿಬೀಳತಕ್ಕವಳಲ್ಲ !

**ವಿಶ್ವ:**—ಮಗಳೇ! ನಮ್ಮ ಜಾತಿಯ ಧರ್ಮವನ್ನೂ, ನಿನ್ನ ನಿಜವಾದ ಸುಖದ ಸಮಾಧಾನವನ್ನೂ, ನಾನು ನಿನಗೆ ಹೇಳುತ್ತೇನೆ. ಅದು ನಿನಗೆ ಅಹಿತವೆಂದು ತೋರುವದು !

**ಮಹಾ:**—ಜಾತಿಯ ಧರ್ಮಾನುಸಾರವಾಗಿ ವೇಶ್ಯೆಯರ ತಾಯಿಂದಿರು, ಹೀಗೆ ಉಪದೇಶ ಮಾಡುವದು ಯೋಗ್ಯವೇ. ಮತ್ತು ಯಾವಳು ತನ್ನ ಶರೀರವನ್ನು ಹುಡುಕಿಕೊಂಡು ಬರುವ ಮಾನವರೂಪಿ ಕಾಗಿಗಳಿಗೋಸ್ಕರ ಬೀದಿಯಲ್ಲಿರಿಸಬೇಕಾಗಿದೆಯೋ, ಅವಳು ಇಂತಹ ಉಪದೇಶವನ್ನು ಕೇಳುವದಾದರೂ ಯೋಗ್ಯವೇ.

**ವಿಶ್ವ:**—ಅಂದರೆ ನೀನು ನನ್ನ ಮಾತುಗಳನ್ನು ಕೇಳುವದಿಲ್ಲವೆಂದಂತಾಯಿತು !

**ಮಹಾ:**—ವೇಶ್ಯೆಯಾಗಿಯೂ ಪತಿವ್ರತೆಯಾಗಲಿಕ್ಕೆ ಬರುತ್ತದೆಂಬ ತತ್ವವನ್ನು, ಪ್ರತ್ಯಕ್ಷ ಜಗತ್ತಿಗೆ ಕೃತಿಯಿಂದ ಮಾಡಿ ತೋರಿಸಬೇಕಾಗಿರುವದು !

**ವಿಶ್ವ:**—ಏನು ? ವೇಶ್ಯೆಯಾಗಿದ್ದು ಪತಿವ್ರತೆಯೇ ? ನಿನಗೆ ಹುಚ್ಚು ಬೇರೆ ಹಿಡಿದಿಲ್ಲವಲ್ಲ ? ಬಂಜೆಯಾಗಿದ್ದವಳಿಗೆ ಪುತ್ರವತಿ ಎಂದೂ, ವಿಧವೆಯಾಗಿದ್ದವಳಿಗೆ ಸೌಭಾಗ್ಯವತಿ ಎಂದೂ, ಭಿಕ್ಷುಕನಾಗಿದ್ದವನಿಗೆ ಚಕ್ರವರ್ತಿಎಂದೂ ಹೀಗೆ ಪರಸ್ಪರ ವಿರೋಧ ಸ್ಥಿತಿಗಳು ಒಂದೇ ಪಂಕ್ತಿಯಲ್ಲಿ ಸಂಭವಿಸಬಹುದೇ ?

**ಮಹಾ:**—ಸಂಭವಿಸುವದಷ್ಟೇ ಏಕೆ? ಪ್ರತ್ಯಕ್ಷ ಪುರಾಣಗಳಲ್ಲಿ ಇಂತಹ ಉದಾಹರಣೆಗಳು ಎಷ್ಟೋ ಇರುವವು. ಕುಂತಿಯು ಪತಿ ಸಹವಾಸವಿಲ್ಲದೇ ಪುತ್ರವತಿಯಾದಳು. ಸಾವಿತ್ರಿಯು ಪತಿಯು ಮೃತನಾಗಿದ್ದರೂ ಸೌಭಾಗ್ಯವತಿಯಾದಳು. ಧ್ರುವನು ನಿರ್ಧನನಾಗಿದ್ದರೂ

ಚಕ್ರವರ್ತಿಯಾದನು. ನೀಚ ಸ್ಥಿತಿಯು ನಾಶವಾಗಿ ಉಚ್ಚ ಸ್ಥಿತಿಯ ಬರಬೇಕಾದರೆ, ತಮ್ಮ ತಮ್ಮ ಕೃತಿಯೇ ಕಾರಣವಾಗುವದು.

**ವಿಶ್ವ:—** ಇಂಥ ಸಂಗತಿಗಳು ಶಾಂತವಾಗಿ ಕುಳಿತಸಮಯದಲ್ಲಿ, ಬರೇ ಮಾತಾಡುವದಕ್ಕೆ ಅಥವಾ ಕೇಳುವದಕ್ಕೆ ನೆಟ್ಟಗೆ. ಆದರೆ ಪ್ರತ್ಯಕ್ಷವಾಗಿ ತೋರಿಸುವದಕ್ಕೆ ನಮ್ಮ ಧರ್ಮವೇ ಬಹಳ ಸುಲಭ. ಆದ್ದರಿಂದ ನೀನು ಈ ಪುರಾಣದಲ್ಲಿಯ ಕಠಿಣವಾದ ತೊಂದರೆಯಲ್ಲಿ ಬೀಳದೇ, ನಾನು ಹೇಳುವಂತೆ, ಅಲ್ಪಶ್ರಮದಿಂದ ಅಪಾರವಾದ ಸಂಪತ್ತಿಯನ್ನು ದೊರಕಿಸುವಂಥ, ಸರಳಮಾರ್ಗವನ್ನು ಅವಲಂಬಿಸು. ನಿನಗೆ ಹೇಳುವಷ್ಟು ಹೇಳಿದ್ದಾಯಿತು. ಇನ್ನು ಮೇಲೆ ನಿನ್ನ ದೈವ. (ಹೋಗುವಳು)

**ಮಹಾ:—** ಬಾಲ್ಯ, ತಾರುಣ್ಯ, ವಾರ್ಧಿಕ್ಯ ಹೀಗೆ ಸರ್ವ ಆಯುಷ್ಯಕ್ರಮವನ್ನು, ಯಾವಳು ಕೆಸರಿನಲ್ಲಿ ಕಳೆದಿರುವಳೋ ಇಂತಹ ಮಾನವರೂಪಿ ಕಪ್ಪೆಗೆ, ಪರಮಪವಿತ್ರವಾದ ಗಂಗೋದಕದ ಮಹತ್ವವು ಹೇಗೆ ತಿಳಿಯಬೇಕು? ಶಿವ ಶಿವಾ! ಪರಮೇಶ್ವರಾ! ನಮ್ಮ ಗಣಿಕಾ ಜನರ ಸ್ಥಿತಿಯು ಎಂಥ ಶೋಚನೀಯವಾದದ್ದು. ತಾರುಣ್ಯದ ಭರದಲ್ಲಿ, ವಿಷಯವಾಸನೆಯ ಕ್ಷಣಿಕ ವಿಲಾಸದಿಂದಲೂ, ಮಿಥ್ಯಾಗುಣಗಳ ಪ್ರಶಂಸೆಯಿಂದಲೂ, ಸ್ವರೂಪದ ಭ್ರಾಮಕ ಪ್ರಕಾಶದಿಂದಲೂ, ಸತ್ಯಾಸತ್ಯ, ಹಿತಾಹಿತಗಳ ಯೋಗ್ಯತೆಯನ್ನು ಒಂದೇ ಸಮವಾಗಿ ತಿಳಿದು, ಕಾಲವು ಹೇಗೆ ಆನಂದಕರವಾಗಿ ಗಮಿಸುವದು. ಮುಂದೆ ವೃದ್ಧಾಪ್ಯವು ಪ್ರಾಪ್ತವಾಗಲು, ಪೂರ್ವದ ಭರಭರಾಟಕ್ಕೆ ಇಳಿತವು ಪ್ರಾರಂಭವಾಗಿ, ಹಲ್ಲುಗಳು ಬೀಳುವದರಿಂದ ಹಾಡುವದಕ್ಕೆ ಬರುವದಿಲ್ಲ; ಕೈಕಾಲುಗಳ ಶಕ್ತಿ ಕಡಿಮೆಯಾಗಿ ನೃತ್ಯಮಾಡುವದಕ್ಕೆ ಶಕ್ತಿ ಇಲ್ಲ; ಮುಖಚಂದ್ರನ ವರ್ತುಲಾಕಾರವು ನಷ್ಟವಾಗಿ, ತ್ರಿಕೋಣತ್ವವು ಬರುವದು. ಆಮೇಲೆ ಅಸ್ಥಿಪಂಜರವಾದ ದೇಹಕ್ಕೆ ಅಲಂಕಾರವನ್ನು ಹಾಕಿ, ವಿಸ್ತಾರವಾದ ಬೈತಲೆಯ ಮಧ್ಯದಲ್ಲಿ ಕಾಡಿಗೆಯನ್ನು ತುಂಬಿ, ಸಿರಿಗೆ ಕಟ್ಟಿದ ಮುಖಕ್ಕೆ ಬಣ್ಣವನ್ನು ಹಚ್ಚಿ, ತಾರುಣ್ಯವನ್ನೆ ತರುವದಕ್ಕೆ ಪ್ರಯತ್ನಮಾಡುವರು. ಎಷ್ಟು ಪ್ರಯತ್ನ ಮಾಡಿದರೂ

ಅದು ಸಾಧಿಸುವದಿಲ್ಲ. ಮತ್ತು ಅವರ ಮನೆಗೆ ಯಾರೂ ಬರುವದಿಲ್ಲ. ಆ ಮೇಲೆ ಗಾಳಿಗೆ ಹಾರಾಡುವ ಎಂಜಲು ಪತ್ರಾವಳಿಯಂತೆ, ತಾನೆ ಮನೆ ಮನೆಗೆ ತಿರುಗಾಡಬೇಕಾಗುವದು. ಇಂತಹ ಜನ್ಮವನ್ನು ಯಾರು ಧನ್ಯ ವೆಂದು ತಿಳಿಯುವರೊ ಅವರಿಗೆ ಧಿಕ್ಕಾರ! ಧಿಕ್ಕಾರ! ಧಿಕ್ಕಾರವಿರಲಿ.

ರಾಗ ಪಹಡಿ; ತಾಳ ಧೂಮಾಳಿ.

**ಸಖಿ ವೇಶ್ಯಾಂಗನೆಯಾ ಜನ್ಮವಿದೂ ವ್ಯರ್ಥವೇ।**
**ಸುಖವೇನೇ ಮಹಾ ಸಂಕಟದೀ ಕಾಲಕಳೆವರೇ॥** ಪಲ್ಲ॥
**ಜರಠರಾದ ಮೇಲಿವರನ್ನು ಆರು ಕೇಳ್ವರೇ ॥೧॥**

( ತುಂಬರ ಅಳುತ್ತಾ ಪ್ರವೇಶಿಸುವಳು )

**ಮಹಾ:**—ಸಖಿಯಳೇ? ಒಳ್ಳೇ ಸಮಯಕ್ಕೆಬಂದೆ. ನೀನು ಇಲ್ಲದಿದ್ದರೆ ನನಗೆ ಏನೋ ತಪ್ಪಿಸಿಕೊಂಡಂತಾಗುವದು. ಈಹೊತ್ತು ಗಾಯನ ಶಾಲೆಯಲ್ಲಿ ಏನೇನು ಅಭ್ಯಾಸಮಾಡಿದೆ? ಅಣ್ಣನು ಬಂದನೇ? ಇದೇನು ನೀನು ಒಂದೂ ಮಾತನಾಡುವದಿಲ್ಲ. ಕಣ್ಣುಗಳು ಅಶ್ರುಗಳಿಂದ ತುಂಬಿರುವವು, ಶರೀರವು ಥರಥರ ಕಂಪಿಸುತ್ತಿರುವದು. ನಿನಗೆ ಆಗಿರುವದಾದರೂ ಏನು?

ರಾಗ ಭೈರವಿ; ತಾಳ ಧೂಮಾಳಿ.

**ಪೇಳೆ ದೀನ ವದನವೇಕಿನಿತು ಸಖಿ ಪೇಳೆ॥ಪಲ್ಲ॥ ಇನಿತೇಕೆ ಭೀತಳಾದೆ। ಘನ ಶೋಕವ ನೀ ಮಾಳ್ಪೆ। ಮದಿ ನೊಂದು ಬರಿದೇಕೆ ಯೋಚಿಪೆ ॥೧॥**

**ತುಂಬುರ:**—ಈ ಹೊತ್ತು ಗಾಯನ ಶಾಲೆಯಲ್ಲಿ ಅಣ್ಣನಾದ ಬ್ರಹ್ಮಾನಂದನು ವೃಕ್ಷಲತಾಂಗನ್ಯಾಸ ಕಲಿಸುತ್ತೇನೆಂದು ಆಲಿಂಗನ ಕೊಡುವದಕ್ಕೆ ಬಂದನು. ನಾನು ಅದಕ್ಕೆ ಸಮ್ಮತಿಸಲಿಲ್ಲ.

( ವಿಶ್ವಮೋಹಿನಿ, ಬ್ರಹ್ಮಾನಂದರು ಬರುವರು )

**ವಿಶ್ವ:**—ಏನು ಅನ್ನುವಿ ಆ ಹುಡುಗಿಯು ಸ್ತ್ರೀಯಾಗಿದ್ದವಳು

ಕುದುರೆಯಾದಳೇ? ಆ ಹುಡುಗನು ಮತ್ತು ಶೇಡ್ಜಿಗಳು ಯಾವಾಗ ಗುಪ್ತ ವಾದರೋ, ಆಗಲೇ ನನಗೆ ಈ ಮೂವರು ಪಿಶಾಚಿಗಳಿರಬಹುದೆಂದು ಭಾಸವಾಯಿತು. ಇವರು ನನ್ನ ಮಗಳಿಗೆ ಮುತ್ತಿಗೆ ಹಾಕಿರುವರು. ಅಂತೇ ನನ್ನ ಮಹಾನಂದೆಯು ಈ ಪಿಶಾಚಿಯ ಸಹವಾಸದಿಂದ ಹಟಮಾಡುತ್ತಿರುವಳು. ನಡೆ ಈಗಿಂದೀಗಲೇ ಆ ಪಿಶಾಚಿಯನ್ನು ಮನೆಬಿಟ್ಟು ಹೊರಗೆ ಹಾಕೋಣ. (ತುಂಬರನೊಡನೆ) ಅಮ್ಮಾ ನೀನು ಯಾರೇ ಆಗಿರು. ನನ್ನ ಮಗನು ನಿನಗೆ ಅಪರಾಧಿಯಾಗಿದ್ದರೆ ಅವನನ್ನು ಕ್ಷಮಿಸು. ನಾನು ನಿನಗೆ ಹಣ್ಣು ಕಾಯಿಗಳಿಂದ ಉಡಿತುಂಬುತ್ತೇನೆ. ಈ ನನ್ನ ಮಕ್ಕಳನ್ನು ಬಿಟ್ಟು ಹೊರಟು ಹೋಗು. ಎಲೋ ಚಾಂಡಾಲ ಮಗನೇ ಮೊದಲು ಆಕೆಯ ಕಾಲುಬೀಳು.

**ಮಹಾ**:—ಅಮ್ಮಾ! ನೀನು ಇದನ್ನು ಯಾರಿಗೆ ಹೇಳುತ್ತಿ? ನಿನ್ನ ಬುದ್ಧಿಗೆ ಭ್ರಮೆಯಾಗಿರುವದೇನು?

**ಬ್ರಹ್ಮ**:—ತಂಗೀ ಮಹಾನಂದೇ! ನೀನು ಈಚೆಗೆ ಅಮ್ಮನ ಸಮೀಪದಲ್ಲಿ ಬಂದು ನಿಲ್ಲು. ಅವಳು ಸ್ತ್ರಿಯಲ್ಲಾ ಪಿಶಾಚಿಯು. ನಾನು ಅವಳಿಗೆ ನರ್ತನ ಕಲಿಸುತ್ತಿದ್ದೆ. ಅಷ್ಟರಲ್ಲಿ ಅವಳು ಕುದುರೆಯಾಗಿ ಝಾಡಿಸಿ ಒದೆಯ ಹತ್ತಿದಳು. ಈ ಹೊತ್ತು ಅವಳು ನನ್ನ ಗಂಧರ್ವ ಶಾಲೆಯನ್ನು ಅಶ್ವಶಾಲೆಯನ್ನಾಗಿ ಮಾಡಿದಳು.

**ಮಹಾ**:—ತಾವು ಪಶುವಿನಂತೆ ವರ್ತಿಸಿದರೆ? ಎರಡನೇಯವರು ಆದರಂತೆ ವರ್ತನ ಮಾಡಬೇಕಾಗುವದು.

**ಬ್ರಹ್ಮ**:—ತಂಗೀ ಇದು ಚೇಷ್ಟೆಯಲ್ಲ. ನಾನು ಪಶುವಿನಂತೆ ಕೃತಿ ಮಾಡಿದ್ದೇನೋ ನಿಜ. ಆದರೆ ಅವಳು ಪ್ರತ್ಯಕ್ಷ ಆಕೃತಿಯಿಂದಲೇ ತೋರಿಸಿದಳು.

**ಮಹಾ**:—ಸರಿ ಹಾಗಾದರೆ ಯೋಗ್ಯವಾಯಿತು.

**ವಿಶ್ವ**:—ನೀವು ಹೀಗೆ ಇಲ್ಲದ್ದೊಂದು ಹಟಮಾಡಿ, ಪಿಶಾಚಿಯ

ಸ್ನೇಹ ಮಾಡುವದಕ್ಕೆ ಪ್ರಾರಂಭಿಸಿದರೆ, ನಾನು ನಾಲಿಗೆಯನ್ನು ಹಿರಿದು ಕೊಂಡು ಪ್ರಾಣವನ್ನು ಕೊಟ್ಟೇನು.

**ಮಹಾ**:—ನೀವು ನನ್ನ ಈ ಜೀವದ ಗೆಳತಿಗೆ ಹೀಗೆ ಸುಮ್ಮಸುಮ್ಮನೆ, ಮನೆಯಿಂದ ಹೊರಗೆ ಹಾಕುವದಕ್ಕೆ ಪ್ರಾರಂಭಿಸಿದರೆ, ನಾನು ಸಹ ಅವಳ ಜೊತೆಯಲ್ಲಿ ಹೊರಟುಹೋಗುವೆನು. ಈಗ ಅವಳು ಪಿಶಾಚಿ ಎಂದು ನಿಮ್ಮ ಕಲ್ಪನೆ ಇದ್ದರೆ, ಅವಳಿಗೆ ದೇವರ ಹೆಸರು ತೆಗೆದುಕೊಳ್ಳುವದಕ್ಕೆ ಹೇಳಿರಿ.

**ಬ್ರಹ್ಮ**:—ಏನೇ! ಅನ್ನು 'ಶಂಕರ, ಶಂಕರ'

**ತುಂಬುರ**.—'ಶಂಕರ ಶಂಕರ'

**ಬ್ರಹ್ಮ**:—'ಮಹದೇವ, ಮಹದೇವ'

**ತುಂಬುರ**:—'ಮಹದೇವ, ಮದದೇವ'

**ಬ್ರಹ್ಮ**:—'ಗುರುದೇವದತ್ತ, ಗುರುದೇವದತ್ತ'

**ತುಂಬುರ**:—'ಗುರುದೇವದತ್ತ, ಗುರುದೇವದತ್ತ'

**ಮಹಾ**:—ತೀರಿತೇ ನಿಮ್ಮ ಸಂಶಯವು? ಏನಾದರೂ ಉಳಿದಿದ್ದರೆ ತೀರಿಸಿಕೊಳ್ಳಿರಿ.

**ವಿಶ್ವ**:—ಮಗನೇ ನಡೆ. ನಾವು ಮೊದಲು ಮನೆಗೆ ಹೋಗಿ, ಆ ಓಡಿ ಹೋದವರು ಏನಾದರೂ ಕಳ್ಳತನ ಮಾಡಿಕೊಂಡು ಹೋಗಿರುವರೋ ನೋಡೋಣ. ಆ ಮೇಲೆ ಈ ಹುಡುಗಿಯ ಸಮಾಚಾರವನ್ನು ತೆಗೆದು ಕೊಳ್ಳೋಣ.

**ಬ್ರಹ್ಮ**:—ಹೌದು ಮೊದಲು ಏನಾದರೂ ಹೋಗಿದ್ದರೆ, ತಿರಿಗಿ ತಕ್ಕೊಂಡು ಬರೋಣ. ಆ ಮೇಲೆ ಮುಂದಿನ ವಿಚಾರ ಮಾಡೋಣ.

(ಹೋಗುವರು)

**ತುಂಬುರ**:—ದೇವೀ, ಓಡಿ ಹೋದರೆಂದು ಹೇಳಿದರಲ್ಲವೆ? ಅವರು ಯಾರು?

**ಮಹಾ**:—ನಿನಗೆ ಗೊತ್ತೇ ಇಲ್ಲವೇನು? ನಿನ್ನ ಅಣ್ಣನು ಮತ್ತು ಅವರಯಜಮಾನರು, ಬೆಳಗಿನಿಂದ ಎಲ್ಲಿಯೋ ಹೋಗಿರುವರು.

**ತುಂಬುರ**:—ಸದಾನಂದೆಯನ್ನು ಕರಕೊಂಡು ಹೋಗಿರುವರೇನು?

**ಮಹಾ**:—ಛೇ. ಛೇ. ಸದಾನಂದೆಯು ಮನೆಯಲ್ಲೇ ಇರುವಳು. ಏನೇ ನಿಮ್ಮ ಅಣ್ಣನು ನಿನ್ನನ್ನುಬಿಟ್ಟು ಓಡಿಹೋದನು. ಇದರ ಬಗ್ಗೆ ನಿನಗೆ ವಿಷಾದವೆನಿಸುವದಿಲ್ಲವೇ?

**ತುಂಬುರ**:—ಅವನು ಅಂಥವನೇ ಇರುವನು. ಎಲ್ಲಿ ಹೋಗುವನೋ, ಅಲ್ಲಿ ಏನಾದರೊಂದು ಕಲಹವನ್ನು ಹುಟ್ಟಿಸುವನು. ಮತ್ತು ಅದು ಮೈಮೇಲೆ ಬರುವಂತೆ ಕಂಡರೆ, ಕೂಡಲೇ ತಾನು ಬೇರೆಯಾಗಿ ಓಡಿಹೋಗುವನು. ಅಂದ ಮೇಲೆ, ಅವನ ವಿಷಯಕ್ಕೆ ನನಗೆ ವಿಷಾದವೆನಿಸುವದೇನು? ಅದಲ್ಲದೇ, ಅಣ್ಣನು ಹೋದರೂ, ದೇವರು, ಅವನ ಬದಲಾಗಿ ಕೇವಲ ತಾಯಿಯಂತೆ ಪ್ರೀತಿಮಾಡುವ ಅಕ್ಕನನ್ನು ಸಂಪಾದಿಸಿ ಕೊಟ್ಟಿರುವರು. ಆದರಿಂದ ನನಗೆ ಹೆಚ್ಚು ಆನಂದವಾಗಿರುವದು. ಒಳ್ಳೇದು ಅವರಿಬ್ಬರೂ ಹೀಗೆ ಓಡಿಹೋಗಲಿಕ್ಕೆ ಕಾರಣವೇನು?

**ಮಹಾ**:—ಬೆಳಿಗ್ಗೆ ಹೀಗಾಯಿತು. ನಿಮ್ಮ ಅಣ್ಣನು ಬಂದು, ತಮ್ಮ ಯಜಮಾನರು ನನ್ನನ್ನು ಕರೆಯುತ್ತಾರೆಂದು ಹೇಳಿದನು. ಸದಾನಂದೆಯು ಅಲ್ಲೇ ಇರಬಹುದೆಂದು ತಿಳಿದು, ನಾನು ಹೋದೆನು. ಅಷ್ಟರಲ್ಲೆ ಅವರು ನನ್ನ ಮೇಲೆ ಅನುರಕ್ತರಾಗಿ, ನನ್ನ ಹಸ್ತಸ್ಪರ್ಶಮಾಡುವದಕ್ಕೆ ಧಾವಿಸಿದರು. ಅವರ ನಿರ್ದಾಕ್ಷಿಣ್ಯತೆಯನ್ನು ನೋಡಿ, ನಾನು ಕುಪಿತಳಾಗಿ, ಅವರನ್ನು ಕ್ರೋಧದೃಷ್ಟಿಯಿಂದ ನೋಡಿದೆನು. ಕೂಡಲೇ ಅವರು ಸತ್ತೆನು ಸತ್ತೆನು ಎಂದು, ಎಚ್ಚರತಪ್ಪಿ ಕೆಳಗೆಬಿದ್ದರು. ಆಗ್ಯೆ ನಾನು ಅವರ ಸ್ಥಿತಿಯನ್ನು ನೋಡಿ, ಭಯಗ್ರಸ್ಥಳಾಗಿ ಓಡಿಬಂದೆನು. ಮುಂದೆ ಅವರು ಜಾಗ್ರತರಾದ ಮೇಲೆ, ತಮ್ಮ ಸ್ಥಿತಿಯ ಬಗ್ಯೆ ಪಶ್ಚಾತ್ತಾಪವಾಗಿ, ಓಡಿ ಹೋಗಿರಬಹುದು,

**ತುಂಬುರ**:—ಅದು ಏನೇ ಇರಲಿ. ಇದೆಲ್ಲ ಸಂಗತಿಯ ಮೇಲಿನಿಂದ, ನನಗೆ ಕಂಡುಬರುವದೇನಂದರೆ? ಆ ಜಗಚ್ಚಾಲಕನ ಮನಸ್ಸಿನಲ್ಲಿ ನಿನ್ನಿಂದ ಏನಾದರೂ, ಲೋಕೋತ್ತರ ಕಾರ್ಯವನ್ನು ಮಾಡಿಸಬೇಕೆಂದಿರುವದು.

**ಮಹಾ:**—ಹೇಗಿದ್ದರೂ ಸಧ್ಯಕ್ಕೆ ನಾನು ಮಾತ್ರ ಅಸತ್ಯ ಭಾಷಣ, ಮಿಥ್ಯಾಸ್ತುತಿ, ಇವುಗಳ ಜಾಲದಲ್ಲಿ ಸಿಕ್ಕು ಪೇಚಾಡುತ್ತಿರುವೆನು.

**ತುಂಬುರ:**—ಮಹಾನಂದಾ! ಅತಿಶಯ ಕಪ್ಪಾದ ಕಲ್ಲಿದ್ದಲಿಯ ಖಣಿಯಲ್ಲಿಯೆ ಅತಿ ತೇಜಸ್ವಿಯಾದ ವಜ್ರವು ದೊರೆಯುವದಿಲ್ಲವೇ ?

**ಮಹಾ:**—ತಾಯಿಯ ಉಪದೇಶ; ಅಕ್ಕನ ನಮ್ರ ಭಾವ; ಅಣ್ಣನ ಕುಚೇಷ್ಟೆ; ಇವುಗಳ ಕಡೆಗೆ ದುರ್ಲಕ್ಷ್ಯ ಮಾಡಿ, ನಾನು ಯಾವ ಅಪೇಕ್ಷೆಯನ್ನು ಧರಿಸಿರುವೆನೊ ಅದು ಕೇವಲ ನಿನ್ನ ಆಶ್ವಾಸನ ಮತ್ತು ಶ್ರೀ ಶಂಕರನ ಮೇಲೆ ನನಗೆ ಇರುವ ವಿಶ್ವಾಸದಿಂದಲೇ. ಇವುಗಳ ಯೋಗದಿಂದ ನಾನು ಬೇಕಾದಂತಹ ಕಠಿಣ ಸಂಕಟವದಗಿದರೂ ಪಾರಾಗುವೆನು. ಒಳ್ಳೇದು ಈ ದಿವಸ ನಮಗೊದಗಿದ ಸಂಕಟವನ್ನು ದೂರ ಮಾಡುವದಕ್ಕೆ, ಆನಂದದಿಂದ ಶಂಕರನ ಭಜನೆ ಮಾಡೋಣ.

ರಾಗ ಬಾಗೇಶ್ರೀ; ತಾಳ ತ್ರಿವಟ.

**ಪುರಹರ ಸ್ಮರಹರ। ರಜತಗಿರಿವರ॥ ಸುರಪಾವನ ಗಂಗಾಧರ ಸುಂದರ। ಭಸ್ಮಪುಂಢ್ರಧರ। ರುಂಡಮಾಲಧರ॥ ಪಲ್ಲ॥ ಫಣಿಧರ ಶಶಿಧರ। ಹಾಲಾಹಲಧರ। ಶೂಲಡಮರುಧರ ವ್ಯಾಘ್ರ ಚರ್ಮಧರ॥ ಕಾಲಕಾಲವರ। ಜ್ವಾಲನೇತ್ರಹರ ॥೧॥**

## ಪ್ರವೇಶ ೫.

---

### ಜಂಗಲ ರಸ್ತಾ

(ಇಂದ್ರ ಮತ್ತು ನಾರದ ಪ್ರವೇಶ)

ರಾಗ ಭೈರವಿ, ತಾಳ ತ್ರಿವಟ

**ವಿಷಕೂಪಾ। ವೇಶ್ಯಾರೂಪ। ಕಪಟತನದಿ ಪ್ರೇಮತೋರ್ಪರ್ರೈ॥ ॥ಪಲ್ಲ॥ ಮನಮೋಹಕ ಮಾತಾಡುತೆ ಮೋಹಿಸಿ। ಧನವನು ಸೆಳೆಯುತೆ । ದೂಡಿಕೊಡುವರು ಪ್ರಾಣವ । ಬಿಡದೆ ಕೊಳ್ವರೂ ॥೧॥**

**ಇಂದ್ರ**:—ನಾರ್ಯಾ ಇನ್ನು ಮೇಲೆ ಕಾಲಹರಣ ಮಾಡಬೇಡಾ. ನನ್ನನ್ನು ಬೇಗನೇ ಈ ನದಿಯ ಪ್ರವಾಹದಲ್ಲಿ ದಬ್ಬಿಕೊಡು.

**ನಾರದ**:—ಧಣಿಯರೇ! ತಮಗೆ ನಿಜವಾಗಿಯೂ ಪ್ರಾಣವನ್ನು ಕೊಡ ಬೇಕೆಂದಿದ್ದರೆ ನದಿಯಲ್ಲಿ ಹಾರಿಕೊಳ್ಳುವದೇಕೆ? ಇದು ಈ ನಗರದ ಸ್ಮಶಾನ ಭೂಮಿಯು. ಇಲ್ಲಿ ಪ್ರಾಣಕೊಡತಕ್ಕವರಿಗೆ ಬೇಕಾದಷ್ಟು ಸಾಧನಗಳಿರು ವವು. ಜೀವಕೊಡತಕ್ಕವರಿಗೆ ಇಲ್ಲಿ ಯಾತರ ಭಯವೂ ಇಲ್ಲ. ಮುಕ್ತದ್ವಾರ ವಿರುವದು. ಇದೋ ನೋಡಿ, ಈ ಪರ್ವತದ ಒಂದು ಮಗ್ಗಲು ಕಳಚಿ ಬಿದ್ದಿರುವದು; ಬೇಕಾದರೆ ನಿಮ್ಮನ್ನು ಕರೆದುಕೊಂಡು ಹೋಗಿ ಅಲ್ಲಿ ನಿಲ್ಲಿಸು ತ್ತೇನೆ, ಮತ್ತು ತಲೆ ಕೆಳಗೆ ಕಾಲು ಮೇಲೆ ಮಾಡಿ ಮೆಲ್ಲನೇ ದೇಹವನ್ನು ಬಿಟ್ಟರಾಯಿತು. ಅಂದರೆ ಕೂಡಲೇ ಕಪಾಳಮೋಕ್ಷವೇ; ಬೇಕಾದರೆ ಹುರಬರಕಾಗಿರುವಂಥ ಒಂದು ಕಲ್ಲು ತಂದು ನಿಮ್ಮ ಮುಂದೆ ಇಡುತ್ತೇನೆ; ಅದಕ್ಕೆ ಟಗರಿನಂತೆ ನಿಮ್ಮ ತಲೆಯನ್ನು ಅಪ್ಪಳಿಸಿದರೆ ನಿಮ್ಮ ತಲೆಯು ಛಿದ್ರ ವಿಛಿದ್ರವಾಗಿ ಹೋಗುವದು; ಬೇಕಾದರೆ ಅಕ್ಕಸಾಲಿಗರ ಅಡ್ಡಣಿಗೆಯಂತೆ ಅದರ ಮೇಲೆ ನೀವು ನಿಮ್ಮ ತಲೆಯನ್ನು ಇರಿಸಿರಿ, ನಾನು ಮತ್ತೊಂದು ಕಲ್ಲು ತೆಗದುಕೊಂಡು ಆದರ ಮೇಲೆ ಅಪ್ಪಳಿಸುತ್ತಾ ಅಪ್ಪಳಿ ಸುತ್ತಾ ಕೂಡುತ್ತೇನೆ; ಅದು ಬೇಡಾದರೆ ಮಂಚದ ಆಕೃತಿಯಂತಿರುವ ಒಂದು ಸುಂದರವಾದ ಚಿತೆಯನ್ನು ರಚಿಸುತ್ತೇನೆ, ಮತ್ತೆ ಆದರ ಮೇಲೆ ನಿಮ್ಮನ್ನು ಮಲಗಿಸಿ ಅಗ್ನಿಸಂಸ್ಕಾರವನ್ನು ಮಾಡುತ್ತೇನೆ; ಅದು ಬೇಡಾದರೆ ಹೋಮಕುಂಡದಂತೆ ಒಂದು ಕುಣಿಯನ್ನು ಮಾಡಿ, ಅದರಲ್ಲಿ ತಮ್ಮನ್ನು ಕೂಡ್ರಿಸಿ, ಮೇಲೆ ಮಣ್ಣು ಹಾಕಿ ಮುಚ್ಚಿಬಿಡುತ್ತೇನೆ; ಅದೂ ತಮ್ಮ ಮನಸ್ಸಿಗೆ ಬಾರದಿದ್ದರೆ, ನಿಮ್ಮ ಕೊರಳಿಗೆ ಒಂದು ಹಗ್ಗವನ್ನು ಕಟ್ಟಿ ಅದೋ ಆಗಿಡಕ್ಕೆ, ತೂಗಹಾಕಿಬಿಡುತ್ತೇನೆ; ಅಂದರೆ, ಮೇಲೆ ಕುಳಿತಿರುವ ಹಳೇ ಹದ್ದುಗಳು ತಮ್ಮದಷ್ಟ ಪುಷ್ಟವಾದ ಶರೀರದ ರಕ್ತಮಾಂಸವನ್ನು ಕೂಡಲೇ ತಿಂದುಬಿಡುವವು. ಇವುಗಳಲ್ಲಿ ನಿಮಗೆ ಆವದು ಸಮ್ಮತವೋ, ಅದನ್ನು

ತಿಳಿಸಿದರೆ, ಅದರಂತೆ ಮಾಡುವದಕ್ಕೆ ತಮ್ಮ ಈ ಆಜ್ಞಾಧಾರಕ ದಾಸನು ತತ್ಪರನಾಗಿರುವನು.

**ಇಂದ್ರ:**—ನಾರ್ಯಾ, ಇವುಗಳೊಳಗೆ ನಾನು ಆವುದನ್ನೂ ಸಮ್ಮತಿಸುವದಿಲ್ಲ.

**ನಾರ್ಯಾ:**—ಹಾಗಾದರೆ ತಮಗೆ ಏನು ಅಪೇಕ್ಷೆ ಇರುವದೋ ಅದನ್ನು ಹೇಳಿದರೆ, ಅದರಂತೆ ತಮ್ಮ ಪ್ರಾಣತಕ್ಕೊಳ್ಳುವದಕ್ಕೆ ನಾನು ಸಿದ್ಧನಾಗಿರುವೆನು. ಶ್ರೀಮಂತರು ಬಡವರಿಗೆ ಇಚ್ಛಾಭೋಜನ ಮಾಡಿಸುತ್ತಾರೆ. ಆದರೆ ನನ್ನಂತಹ ದರಿದ್ರನು, ತಮ್ಮಂತಹ ಶ್ರೀಮಂತರಿಗೆ ಇಚ್ಛಾಭಮರಣವಲ್ಲದೆ ಮತ್ತೇನು ಕೊಡಲಾಗುವದು.

**ಇಂದ್ರ:**—ಹಾಗಾದರೆ ನನ್ನ ಕೊರಳಿಗೆ ಒಂದು ಕಲ್ಲು ಕಟ್ಟಿ ನನ್ನನ್ನು ಆ ನದಿಯಲ್ಲಿ ದಬ್ಬಿಕೊಡು.

**ನಾರದ:**—ಛೀ, ಛೀ. ಪಾತಕಿ ಜನರ ಪ್ರಾಣವಾಯುವು ಹೊರಟು ಹೋಗುವಪರಿಯಂತ, ಅವರಿಗೆ ಆವಕಾರಣದಿಂದ ತಮಗೆ ಮರಣಬಂದಿರುವದೆಂಬದು ಅವರಿಗೆ ಚನ್ನಾಗಿ ತಿಳಿಯಬೇಕು; ಅಂದರೆ ಅದು ಮರಣವು. ಹೀಗೆ ನದಿಯಲ್ಲಿ ಹಾರಿಕೊಂಡರೆ ಅದು ಅವರಿಗೆ ತಿಳಿಯುವದಿಲ್ಲ. ಆದ್ದರಿಂದ ನಿಮ್ಮ ಜುಟ್ಟನ್ನು ನನ್ನ ಕೈಯ್ಯಲ್ಲಿ ತನ್ನಿರಿ; ಅಂದರೆ ತೆಂಗಿನಕಾಯಿಯನ್ನು ಒಡೆಯುವಂತೆ ನಿಮ್ಮ ತಲೆಯನ್ನು ಈ ಶಿಲೆಯ ಮೇಲೆ ಅಪ್ಪಳಿಸಿಸುತ್ತಾ ಕೂಡುತ್ತೇನೆ.

**ಇಂದ್ರ:**—ಪಂಚಭೂತಾತ್ಮಕವಾದ ದೇಹವನ್ನು ತ್ಯಾಗಮಾಡಿ, ದಿವ್ಯದೇಹ ಧಾರಣಮಾಡುವದಕ್ಕೆ, ಜಲಸಮಾಧಿಯ ಹೊರತು, ಉತ್ತಮ ಸಾಧನವು ಬೇರೆ ಇಲ್ಲಾ. ಅಂತೇ ಪ್ರತಿ ಒಬ್ಬ ಅವತಾರಿಕಪುರುಷನು ಅಂತ್ಯಕಾಲಕ್ಕೆ ಇದೇ ಸಾಧನವನ್ನು ಅವಲಂಬಿಸುತ್ತಾನೆ.

**ನಾರ್ಯಾ:**—ಅಂದರೆ ತಾವು ಅವತಾರಪುರುಷರೋ? ಮಹಾಸ್ವಾಮೀ ಮೃತ್ಯುಲೋಕದಲ್ಲಿ ವೇಶ್ಯಾ ಜನರ ಕೂಡಾ ವಿಲಾಸ ಮಾಡಿ,

ಜಗತ್ತಿಗೆ ಜ್ಞಾನೋಪದೇಶಮಾಡುವಂತ ದೇವತೆಗಳು ನಿಮ್ಮಾರು? ಅದಾದರೂ ತಿಳಿಯಲಿ. ನನ್ನ ಕೇಳಿಕೆಯಲ್ಲಿ ಇಂತಹ ನೀಚಕೃತ್ಯವನ್ನು ಮಾಡತಕ್ಕ ದೇವನು, ಒಬ್ಬನೇ ತೋರುವನು.

**ಇಂದ್ರ**:—ಅವನಾರು?

**ನಾರದ**:—ಸ್ವರ್ಗಲೋಕದ ಅಧಿಪತಿಯಾದ ಸಹಸ್ರಾಕ್ಷನು.

**ಇಂದ್ರ**:—ಸ್ವರ್ಗಲೋಕದ ರಾಜನು; ನಾನೇ ಆ ಇಂದ್ರನು.

**ನಾರದ**:—ನಿಜವೇನು? ಹಾಗಾದರೆ ನಿಮ್ಮ ಕಣ್ಣುಗಳೇನಾದವು.

**ಇಂದ್ರ**:—ಮಹಾಸಂದೆಯ ಕ್ರೋಧಾಗ್ನಿಯಿಂದ ದಗ್ಧವಾದವು.

**ನಾರದ**:—ಒಂದೆರಡಾಗಬಹುದು; ಆದರೆ ನಿಮಗೆ ಸಾವಿರ ನೇತ್ರಗಳಿಲ್ಲವೇ?

**ಇಂದ್ರ**:—ಮೊದಲು ಎರಡು ಕಣ್ಣುಗಳು ಸುಟ್ಟುಹೋದವು. ಅದರ ಬಗ್ಗೆ ಕೋಪದಿಂದ ಉಳಿದ ಕಣ್ಣುಗಳು ತೆರದವು. ಅವು ಕೂಡಾ ದಹಿಸಿ ಹೋದವು.

**ನಾರದ**:—ಅಹಹ! ಆಕಳ ಹುಣ್ಣಿಗೆ, ತನ್ನ ಚೊಂಚುಪುಟವನ್ನು ಚುಚ್ಚುವದಕ್ಕೆ ಜಪ್ಪಿಸಿಕೊಂಡು ಕುಳಿತ ಕಾಗಿಗೆ, ಹೇಗೆ ಅದರ ಬಾಲದ ಹೊಡತವು ಬಿದ್ದ ಕೂಡಲೇ ಕಣ್ಣುಗಳು ಒಡದು, ಪಕ್ಕಗಳನ್ನು ಹೊಡದು ಕೊಳ್ಳುತ್ತಾ, ಪ್ರಾಣಗಳನ್ನು ಬಿಡುವ ಪ್ರಸಂಗ ಬರುವದೋ ಅದರಂತೆ ನಿಮ್ಮ ಸ್ಥಿತಿಯಾಯಿತೋ? ಒಳ್ಳೆದು, ನೀವು ಸ್ವರ್ಗದ ರಾಜ್ಯವನ್ನು ಬಿಟ್ಟು ಮೃತ್ಯುಲೋಕಕ್ಕೆ ಬಂದ ಕಾರಣವೇನು?

**ಇಂದ್ರ**:—ಮಹಾಸಂದೆಯ ಸತ್ವವನ್ನು ಹರಣ ಮಾಡುವದಕ್ಕೆ.

**ನಾರದ**:—ಅಂದಮೇಲೆ ಹಾಗೇ ಮರಳಿ ಹೋಗುವಿರೇನು?

**ಇಂದ್ರ**:—ನಾನೇ ಸತ್ವಹೀನನಾದ ಮೇಲೆ ಅವಳ ಸತ್ವವನ್ನು ಹೇಗೆ ಹರಣಮಾಡಲಿ. ನನಗೆ ಹೀಗೆ ತೋರುವದು, ಆ ಮಹಾಸಂದೆಯು, ಲಕ್ಷ್ಮಿ-ಪಾರ್ವತಿ-ಸರಸ್ವತಿ; ಈ ಮೂವರಲ್ಲಿ ಯಾರಾದರೂ ಆಗಿರಬಹುದು.

**ನಾರದ**:—ಹೀಗೆ ತಮ್ಮ ಮನಸ್ಸಿಗೆ ನಿಶ್ಚಯವಾಯಿತೊ?

**ಇಂದ್ರ**:—ತೀರಾ ನಿಶ್ಚಯವಾಯಿತು. ಈ ಮೂವರಲ್ಲದೆ ಮತ್ತಾರೂ ಈ ಪ್ರಕಾರ ನನ್ನ ದುರ್ದೆಶೆಯನ್ನು ಮಾಡುವದಕ್ಕೆ ಸಮರ್ಥರಲ್ಲ.

**ನಾರದ**:—ಹಾಗಾದರೆ?

**ಇಂದ್ರ**:—ಎಲೊ! ದೇವೇಂದ್ರನಾದ ನನಗೆ ಏಕವಚನದಿಂದ ಮಾತಾಡತಕ್ಕವನು ನೀನಾವನೋ? ನಾನು ಅಂಧನಾಗಿದ್ದರೂ ಒಂದೇ ಶಾಪೋಕ್ತಿಯಿಂದ ನಿನ್ನನ್ನು ದಗ್ಧಮಾಡಿಬಿಡುವೆನು. ತಿಳಿಯಿತೋ?

**ನಾರದ**:—ಅಂಧನಾದರೂ ನಿನ್ನ ಗರ್ವವು ಇನ್ನೂ ನಾಶವಾಗಲಿಲ್ಲವೇ? ಸ್ವಲ್ಪ ತಡೆ; ನಿನ್ನನ್ನು ಹೀಗೇ ಕರೆದುಕೊಂಡು ಹೋಗಿ ದೇವಾದಿದೇವನಾದ ಮಹದೇವನ ಸಮ್ಮುಖದಲ್ಲಿ ನಿಲ್ಲಿಸುತ್ತೇನೆ. ನಡೆ.

**ಇಂದ್ರ**:—ಎಲೋ ನೀನು ಅಂಥ ಧೈರ್ಯಶಾಲಿಯಿರುವಿಯಾದರೂ ಯಾರು?

**ನಾರದ**:—ನಿನಗೆ ಮಹಾನಂದಿಯು ಯಾರೆಂಬದನ್ನು ಯಾರು ತಿಳಿಸಿದರೋ ಅವನೇ ನಾನು. ಈಗ ನಿನಗೆ ಮಹಾನಂದಿಯ ಯಜಮಾನನು ಯಾರೆಂಬದನ್ನು ಪ್ರತ್ಯಕ್ಷವಾಗಿ ತೋರಿಸುತ್ತೇನೆ! ಕಿವಿಗೊಟ್ಟುಕೇಳು.

(ಒಳಗೆ 'ಹರಹರ ಮಹದೇವ' ಎಂದು ಶಬ್ದವಾಗುವದು.)

**ಇಂದ್ರ**:—(ಕೈಮುಗಿದು) ದೇವ ಋಷಿಗಳೆ ನನ್ನನ್ನು ಕ್ಷಮಿಸಿರಿ. ನಾನು ವಿಷಯವಾಸನೆಗೆ ಮದಾಂಧನಾಗಿದ್ದರಿಂದ ಇಂತಹ ದೊಡ್ಡ ಅಪರಾಧಕ್ಕೆ ಗುರಿಯಾದೆನು. ನಾನು ತಮ್ಮ ಬಾಲಕನಾಗಿರುವೆನು. ವಾದಿಸುವ ಕಾಲದಲ್ಲಿ ತಾವೇ ನನಗೆ ಸ್ಫೂರ್ತಿಯನ್ನುಂಟಮಾಡಿದಿರಿ. ಇನ್ನು ಮೇಲೆ ಇದರೊಳಗಿಂದ ನನ್ನನ್ನು ಮುಕ್ತಮಾಡುವದು ತಮ್ಮನ್ನೇ ಕೂಡಿರುವದು. ಈಶ್ವರನ ಸಮ್ಮುಖದಲ್ಲಿ ಹೀಗೇ ನನ್ನನ್ನು ಕರೆದುಕೊಂಡು ಹೋಗಿ ನಿಲ್ಲಿಸಿದರೆ, ಬರೇ ನನ್ನ ಶರೀರಮಾತ್ರವಲ್ಲ, ನನ್ನ ಹೆಸರು ಸಹ ನಿರ್ನಾಮವಾಗಿ ಹೋಗುವದು. ಆದ್ದರಿಂದ ನನ್ನನ್ನು ಕಾಪಾಡಬೇಕು.

**ನಾರದ**:—ಒಳ್ಳೇದು ಏಳು; ಈಗ ನಾನು ಹೇಳಿದಂತೆ ಮಾಡು.

**ಇಂದ್ರ:**—ತಾವು ಹೇಳಿದಂತೆ ಮಾಡುತ್ತೇನೆ. ಆದ್ದರೆ ಶಂಕರನ ಮುಂದೆ ಮಾತ್ರ ನನ್ನನ್ನು ಕರೆದುಕೊಂಡು ಹೋಗಿ ನಿಲ್ಲಿಸಬೇಡಿರಿ. ಅವರ ಕೋಪವು ಬಹಳೇ ಭಯಂಕವಾಗಿರುವದು.

**ನಾರದ:**—ಏನೂ ಚಿಂತೆಯಿಲ್ಲ. ನಿನಗೆ ಹೇಗೆ ಕಣ್ಣುಗಳು ಕಾಣಿಸುವದಿಲ್ಲವೋ ಅದರಂತೆ ಕಿವಿಗಳು ಕೇಳಿಸುವದಿಲ್ಲ; ಮತ್ತೂ ಮಾತನಾಡಲಿಕ್ಕೆ ಬರುವದಿಲ್ಲ; ಇಂತಹದೊಂದು ಅಸ್ತಿಮಾಂಸದ ಗೊಂಬೆ ಎಂದು ತಿಳಿದು ನೀನು ಸುಮ್ಮನಿರು. ನಿನ್ನ ಎಲ್ಲ ಕೆಲಸಗಳನ್ನು ನಾನು ಮಾಡುತ್ತೇನೆ. ಇದೋ ನೋಡು ಶಿವಗಣಗಳು ಕುಣಿಯುತ್ತಿರುವವು.　　(ಹೋಗುವನು)

## ಪ್ರವೇಶ ೬.

---

(ಕೈಲಾಸ ಪರ್ವತ. ಶಿವಗಣಗಳು ಹಾಡುತ್ತಿರುವವು.)

**ಶಂಕರ:**—ನಂದಿಯೇ ಏನು ಸಮಾಚಾರವು?

**ನಂದಿ:**—ಮಹಾರಾಜ!

**ಶಂಕರ:**—ನಾನು ಸಮಾಧಿಸ್ಥನಾಗಿ ಎಷ್ಟುಕಾಲವಾಯಿತು?

**ನಂದಿ:**—ಮಹಾರಾಜ! ಒಂದೂವರೆ ತಪವಾಯಿತು. ದೇವಾ

**ಶಂಕರ:**—ಹಾಗಾದರೆ, ಮಧ್ಯದಲ್ಲಿಯೇ ನನ್ನ ಸಮಾಧಿಯು ಭಂಗವನ್ನು ಏಕೆ ಮಾಡಿದಿರಿ?

**ನಂದಿ:**—ದೇವಾಧಿದೇವಾ! ತಾವು ಸಮಾಧಿ ಸುಖದಲ್ಲಿ ನಿಮಗ್ನರಾಗಿರುವದರಿಂದ, ತಮ್ಮ ಈ ಸೇವಕರಿಗೆ, ತಮ್ಮ ಸೇವೆ ಇಲ್ಲದೇ ಕಾಲವು ಕಳೆಯದಾಯಿತು. ಅದಕ್ಕೋಸ್ಕರ ನಾವು, ಸ್ತವನ ಮಾಡುವದಕ್ಕೆ ಪ್ರಾರಂಭಿಸಿದೆವು. ಆದ್ದರಿಂದ ಸಮಾಧಿಯು ಭಂಗವಾಯಿತು. ಆದರೆ ಈ ದೀನ ಬಾಲಕರ ಮೇಲೆ, ಕೋಪವನ್ನು ಮಾಡದೆ, ಕ್ಷಮಿಸಬೇಕು.

**ಶಂಕರ:**—ಸಮಾಧಿಯ ವಿಸರ್ಜನೆಯಿಂದ ಪ್ರಾಪ್ತವಾದ ಖಿನ್ನತೆಯನ್ನು, ತಾಂಡವ ನೃತ್ಯದಿಂದ ಹೋಗಲಾಡಿಸೋಣ.

**ನಂದಿ**:—ಮಹಾರಾಜ್ಞಾ

**ನಾರದ**:—ತಾತಾ ಈ ದೀನ ಬಾಲಕನು ತಮ್ಮ ಚರಣಕ್ಕೆ ಲೀನನಾಗಿದ್ದಾನೆ. ಕೃಪಾದೃಷ್ಟಿಯಿಂದ ಅವಲೋಕಿಸಬೇಕು.

**ಈಶ್ವರ**:—ಯಾರು ? ಮಗನೇ ನಾರದ, ಏಳು ಏಳು, ಹೀಗೆ ಬಾ; ನನ್ನ ಸನ್ನಿಧಿಯ ಆಸನದಲ್ಲಿ ವಿಶ್ರಮಿಸು.

**ನಾರದ**:—ತಾತಾ, ಈ ಹೊತ್ತು ನಿಮಗೆ ಒಂದು ಅಶುಭ ವರ್ತಮಾನವನ್ನು ತಿಳಿಸಬೇಕಾಗಿದೆ.

**ಈಶ್ವರ**:—ಅದೇನು ?

**ನಾರದ**:—ಜಗನ್ಮಾತೆಯರಾದ ಪಾರ್ವತಿ, ಗಂಗಾದೇವಿಯರು ಮೃತ್ಯುಲೋಕದಲ್ಲಿ ವಾರಂಗನೆಯರಾಗಿ ವಾಸಮಾಡಿರುವರು.

**ಈಶ್ವರ**:—ಎಲೋ! ಅದರಲ್ಲಿ ಅಶುಭವೇನಾಯಿತು ?

**ನಾರದ**:—ಏನು ಇದು ಅಶುಭವಲ್ಲವೇ? ತಾತಾ ಈ ಜಗತ್ರಯದಲ್ಲಿ ಯಾವನಿಗೆ, ತನ್ನ ಹೆಂಡತಿಯು ವೇಶ್ಯೆಯಾದದ್ದನ್ನು ಕೇಳಿ ಕೋಪ ಬರಲಿಕ್ಕಿಲ್ಲವೋ, ಅಂಥ ಮನುಷ್ಯನು ಒಬ್ಬನೂ ದೊರೆಯಲಾರನು. ತಾವು ಈ ವರ್ತಮಾನವನ್ನು ಕೇಳಿ, ಮಾತೋಶ್ರೀಗೆ ಶಾಸನ ಮಾಡುವದು ಪತ್ತಾಟ್ಟಿಗಿರಲಿ; ನನಗೇನು ಮಾಡುವಿರೋ ಎಂದು ತಿಳಿದಿದ್ದೆನು. ಆದರೆ ಈ ಪ್ರಕಾರ ವೇನೋ ಭಿನ್ನವಾಗಿ ತೋರುವದು.

**ಈಶ್ವರ**:—ನಾರದಾ ಕೇಳು, ಒಂದಾನೊಂದು ದಿವಸ ಪಾರ್ವತಿ ಮತ್ತು ಗಂಗಾ ಇವರು ಸಾಮಾನ್ಯ ಮಾನವ ಸ್ತ್ರೀಯರಂತೆ ಜಗಳಾಡುವದಕ್ಕೆ ಪ್ರಾರಂಭಿಸಿದರು. ಆಗ್ಯೆ ನಾನು ಅವರಿಗೆ ಅತಿಶಯ ಕೋಪದಿಂದ, ನೀವು ಮೃತ್ಯುಲೋಕದಲ್ಲಿ ವಾರಂಗನೆಯರಾಗಿ ಜನ್ಮಿಸಿರಿ ಎಂದು ಶಾಪವನ್ನು ಕೊಟ್ಟೆನು. ಮತ್ತು ಈ ಶಾಪವು ಬರೇ ನನ್ನ ಸ್ತ್ರೀಗೆ ಮಾತ್ರವಲ್ಲ. ಈ ತ್ರಿಲೋಕದಲ್ಲಿ ಯಾವ ಸ್ತ್ರೀಯು ಗೃಹಕಲಹಕ್ಕೆ ಉದ್ಯುಕ್ತಳಾಗುವಳೋ ಅವಳಿಗೆ ಮುಂದೆ ವೇಶ್ಯಾ ಜನ್ಮವೇ ಬರುವದು. ಒಳ್ಳೇದು ನಾರದಾ, ನನ್ನ ಗಿರಿಜೆಯ ಅಂಗದಲ್ಲಿ ವಾರಾಂಗನೆಯ ಚಿನ್ಹಗಳು ಹೇಗೆ ಹೇಗೆ ಇರುವವು.

**ನಾರದ**:—ಮಾತೋಶ್ರೀಯವರು ಇಷ್ಟೊಂದು ಸುಸ್ವರ ಗಾಯನ ಮಾಡುವರಲ್ಲಾ; ಯಾವತ್ತೂ ಯಕ್ಷರೂ ಗಂಧರ್ವರೂ ಅಪ್ಸರೆಯರೂ ಬೇರೆ ಬೇರೆ ರೂಪಗಳನ್ನು ಧರಿಸಿ ಅದನ್ನು ಕೇಳುವದಕ್ಕೋಸ್ಕರ ಅವರ ಸುತ್ತುಮುತ್ತು ತಿರುಗುತ್ತಿರುವರು.

**ಈಶ್ವರ**:—ವ್ಹಾ. ವ್ಹಾ. ನನ್ನ ಪಾರ್ವತಿಯು ಅಂಥ ಸುಸ್ವರ ಗಾಯನವನ್ನೇ ಮಾಡುತ್ತಿರುವಳು. ಒಳ್ಳೇದು ನಾರದಾ ಅವಳು ನೃತ್ಯವನ್ನು ಹೇಗೆ ಮಾಡುವಳು.

**ನಾರದ**:—ತಾವು ತಾಂಡವ ನೃತ್ಯದ ಉತ್ಪಾದಕರೇನೋ ನಿಜ. ಆದರೆ ಮಾತೋಶ್ರೀಯ ನೃತ್ಯವನ್ನು ನೋಡಿದರೆ ನಿಮ್ಮ ನೃತ್ಯವು ತೀರಾ ತುಚ್ಛವೆನಿಸುವದು.

**ಈಶ್ವರ**:—ಏಕೆ? ನಾರದಾ ನಮ್ಮ ನೃತ್ಯಕ್ಕೆ ನೀನು ಚೇಷ್ಟೆಯನ್ನು ಮಾಡುವದಕ್ಕೆ ಪ್ರಾರಂಭಿಸಿದೆ.

**ನಾರದ**:—ತಾತಾ ಹಾಗಲ್ಲ! ಇದ್ದಸ್ಥಿತಿಯನ್ನು ನಿವೇದನ ಮಾಡಿದೆನು.

**ಈಶ್ವರ**:—ಒಳ್ಳೇದು ಅವಳು ಸ್ವರೂಪದಿಂದ ಹೇಗೆ ಕಾಣಿಸುವಳು? ಹೇಳು ನೋಡೋಣ.

**ನಾರದ**:—ತಾತಾ ಮಾತೋಶ್ರೀಯ ಸ್ವರೂಪದ ವರ್ಣನೆಯನ್ನು ಮಾಡುವದಕ್ಕೆ ಈ ಬಾಲಕನು ಸಮರ್ಥನೇ. ಆದರೂ ಮಾತೋಶ್ರೀಯ ಸ್ವರೂಪವು ಇಷ್ಟೊಂದು ಮನೋಹರವಾಗಿ ಕಾಣುವದಲ್ಲಾ, ಅವರ ಸ್ವರೂಪಕ್ಕೆ ಲುಬ್ಧನಾಗಿ ಅವರ ಪ್ರಾಪ್ತಿಯ ಇಚ್ಛೆಯನ್ನು ಧರಿಸಿಕೊಂಡು, ದೇವೇಂದ್ರನು ಸಹಾ ವೇಷಾಂತರದಿಂದ ಹೋಗಿದ್ದನು.

**ಈಶ್ವರ**:—ಏನು ದೇವೇಂದ್ರನು ನನ್ನ ಭಾರ್ಯೆಯ ಪ್ರಾಪ್ತಿಗೋಸ್ಕರವಾಗಿ ಹೋಗಿದ್ದನೇ? ಛೇ ಇದನ್ನು ನಾನು ಎಂದಿಗೂ ಸಹಿಸಲಾರೆನು. ದಕ್ಷಪ್ರಜಾಪತಿಯು ನನ್ನ ಪಾರ್ವತಿಯ ಮಾನಭಂಗ ಮಾಡಿದ್ದರಿಂದ,

ನಾನು ವೀರಭದ್ರನನ್ನು ಉತ್ಪನ್ನ ಮಾಡಿದೆನು. ಹಾಗೆ ಈಗ ಎರಡನೇ ವೀರ ಭದ್ರನನ್ನು 'ಉತ್ಪನ್ನ ಮಾಡಿ, ಆ ದುಷ್ಟ ದೇವೇಂದ್ರನ ಶರೀರವನ್ನು, ಛಿನ್ನ ವಿಛಿನ್ನ ಮಾಡಿಬಿಡುತ್ತೇನೆ. ಇಷ್ಟು ಮಾಡುವದಕ್ಕೂ ಸಹಾ ನನಗೆ ಅವಕಾಶವಿಲ್ಲಾ. ನಾನು ಈ ತೃತೀಯ ನೇತ್ರವನ್ನು ತೆರೆದು, ಈ ಮೂರು ಲೋಕವನ್ನು ಸುಟ್ಟು ಬೂದಿ ಮಾಡಿಬಿಡುತ್ತೇನೆ.

ರಾಗ ಅಡಾಣ, ತಾಳ ತ್ರಿವಟ.

**ತ್ರಿಲೋಕವನ್ನು ನಿಟಿಲ ನೇತ್ರದಿಂ ಭರದೀ। ಪುಟವಮಾಡಿ ಖಿಲ ಮಹೇಂದ್ರ ಗುರು। ಅರುಣ ತರಣಿ ಸಹ। ಯಜ್ಞಕಾ ಹುತಿಯ ನೀವೇನಲ್ಲೆ॥ಪಲ್ಲ॥ ಸರ್ವ ಭುವನ ದಹಿಸೆ ಬಿಡದೆ ತೃಣ ಸಹ। ಶರಧಿ ಜಲವನುಕ್ಕೇರಿಸುತೆ। ಪಂಚಭೂತ ಸಂಚ ರಿಪ ಪ್ರಾಣಿಗಳ ॥೧॥**

**ನಾರದ:**—ತಾತಾ ಶಾಂತರಾಗಿರಿ; ದೇವೇಂದ್ರನಿಂದ ಅಂಥ ದೊಡ್ಡ ಅಪರಾಧವೇನೂ ಸಂಭವಿಸಲಿಲ್ಲಾ!

**ಈಶ್ವರ:**—ಹಾಗಾದರೆ ಅವನು ಯಾವ ನೀಚತನವನ್ನು ಮಾಡಿದನು; ಅದನ್ನು ಸವಿಸ್ತಾರವಾಗಿ ಹೇಳು! ಅಂದರೆ ಅವನಿಗೆ, ಯಾವ ಶೀಕ್ಷೆಯನ್ನು ಕೊಡಬೇಕೆಂಬುದನ್ನು ನಿಶ್ಚಯುಮಾಡೋಣ!

**ನಾರದ:**—ಅವನು ಮೊದಲು ಮಾತೋಶ್ರೀಗೆ ಅಪಾರ ಸಂಪ ತ್ತಿನ ಆಸೆಯನ್ನು ತೋರಿಸಿದನು.

**ಈಶ್ವರ:**—ಮೂರ್ಖನ ಅಜ್ಞಾನತನವಾದರೂ ಯಂತಹದು! ಯಲೋ ಯಾವಳ ದ್ರವ್ಯನಿಧಿಯನ್ನು ರಕ್ಷಿಸುವದಕ್ಕೆ ಪ್ರತ್ಯಕ್ಷ ಕುಬೇರ ನಿರುವನೋ, ಅವಳಿಗೇನು ರತ್ನಗಳಿಗೂ ಸುವರ್ಣಕ್ಕೂ ಕೊರತೆಯೇ? ಆದರೆ ಪಾರ್ವತಿಯು ಇದನ್ನು ತಿಳಿಯದಷ್ಟು ಅಜ್ಞಾನಿಯಲ್ಲಾ. ಅವಳು ಯಾವಾಗಲೂ ದ್ರವ್ಯವನ್ನು ಪ್ರತಿನಾಶವೆಂದು ಭಾವಿಸಿ, ಅದರ ಸ್ಪರ್ಶವನ್ನೇ ಮಾಡುವದಿಲ್ಲ. ನೊಣಗಳು ಹೇಗೆ ದುರ್ಗಂಧದಲ್ಲಿ ಬಿದ್ದು, ಅದೇ ಸುಖ ವೆಂದು ತಿಳಿಯುವವೋ, ಅದರಂತೆ ಮೂಢ ಜನರು, ದ್ರವ್ಯಕ್ಕೊಸ್ಕರ

ರಾತ್ರಿಯೂ ಹಗಲೂ ಒಂದೇಸವನೆ ವದ್ದಾಡುವರು. ವೋಕ್ಷಪ್ರಾಪ್ತಿಗೆ ರತ್ನಕಾಂಚನಗಳು ಎರವಾಗಿರುವದಲ್ಲದೆ ಶಂಖಾದಿವುಣಿಗಳಿಂದಲೇ ವುನಸ್ಸು ನಿರ್ವಿಕಾರವಾಗುವದೆಂದು ತಿಳಿದು, ಜ್ಞಾನಿಗಳು ರುದ್ರಾಕ್ಷಿ ವುತ್ತು ಶಂಖ ವುಣಿ ಇವುಗಳ ಬೆಲೆಯನ್ನು ವುುತ್ತು ವಾಣಿಕ ಸುವರ್ಣ ಇವುಗಳಿಗಿಂತಲೂ ಹೆಚ್ಚಾಗಿ ತಿಳಿದಿರುವರು. ಇಂತಹ ಪವಿತ್ರ ಅಲಂಕಾರಗಳನ್ನು ಬಿಟ್ಟು, ಆ ರತ್ನಕಾಂಚನ ರೂಪಿ ನರಕ ಸಾವುಗ್ರಿಗಳ ಅಪೇಕ್ಷೆಯನ್ನು ನನ್ನ ಪಾರ್ವತಿಯು ಸರ್ವಥಾ ವಾಡಲಾರಳು.

**ನಾರದ**:—ದೇವೇಂದ್ರನು ಹೀಗೆ ತಿಳಿದಿರಬಹುದು; ವಾತೋ ಶ್ರಿಯು ತವ್ಮು ವೇಲೆ ಕೋಪಿಸಿಕೊಂಡು, ತವ್ಮುನ್ನು ತ್ಯಾಗವಾಡಿರಬಹು ದೆಂದು.

**ಈಶ್ವರ**:—ನನ್ನವೇಲೆ! ಹೀಗೆ ಕಲ್ಪಿಸಬೇಕಾದರೆ ಅವನು ವುೂರ್ಖನೇ ಸರಿ. ಆ ವುಹಾಸಾಧ್ವಿಯ ಪ್ರೇವುವು ನನ್ನವೇಲೆ ಎಷ್ಟೆಂದು ಹೇಳಲಿ. ಅವಳು ನನ್ನ ಅರ್ಧಶರೀರದಲ್ಲಿಯೇ ವಾಸವಾಡುವಳು. ಪಾರ್ವತಿಯು ವಾಯಾ ಸ್ವರೂಪವಿದ್ದು ಶಂಕರನು ಬ್ರಹ್ಮಸ್ವರೂಪನೆಂದು ದೇವೆಂದ್ರನೊಬ್ಬನೇ ಏಕೆ, ಯಾವತ್ತೂ ಜಗತ್ರಯಕ್ಕೂ ಗೊತ್ತಿರುವದು. ಅಂದ ವೇಲೆ ವಾಯಾ ಇವಳು ಬ್ರಹ್ಮನ ವೇಲೆ ಕೋಪಿಸುವಳೇ? ಹೀಗೆ ಎಂದಾದರೂ ಸಂಭವಿಸಿರಬಹುದೇ? ಪಾರ್ವತಿಯು ಶ್ರುತಿಯು; ಶಂಕರನು ಓಂಕಾರ ಸ್ವರೂಪನು. ಒಂದು ವೇಳೆ ಸೂರ್ಯನು ಪಶ್ಚಿವುಕ್ಕೆ ಉದಯಿಸ ಬಹುದು. ಆದರೆ ಪಾರ್ವತಿಯು ಶಂಕರನ ವೇಲೆ ಎಂದೂ ಕೋಪಿಸಲಾರಳು.

**ನಾರದ**:—ಸಂಪತ್ತಿಗೋಸ್ಕರವಲ್ಲದಿದ್ದರೆ ವುತ್ರ್ಯೇನು ಸಂತತಿಯ ಗೋಸ್ಕರವಾಗಿ......

**ಶಂಕರ**:—ನಾರದಾ ನೀನು ಬಹಳ ಅಜ್ಞಾನಿಯು-ಅಲ್ಲದೇ ನಿನ್ನ ಅಭಿಪ್ರಾಯವು ತೀರಾ ಸಟೆಯಾದದ್ದು. ಎಲೋ, ಯಾವಳು ಜಗತ್ತಿನ ಉತ್ಪತ್ತಿಗೆ ಕಾರಣೀಭೂತಳಾಗಿ, ಸರ್ವಪ್ರಾಣಿವಾತ್ರರನ್ನು ನಿರ್ವಿುಸಿದಳೋ ವುತ್ತು ವುನಸ್ಸಿನಲ್ಲಿ ಬಂದಕೂಡಲೇ ವಾನಸಪುತ್ರರನ್ನು ನಿರ್ವಾಣ

ಮಾಡುವ ಸಾಮರ್ಥ್ಯವು ಯಾವಳ ಅಂಗದಲ್ಲಿರುವದೋ, ಅಂತಹ ಆದಿ ಮಾಯೆಯು ಸಂತತಿಗೋಸ್ಕರವಾಗಿ ತನ್ನ ದೇಹವನ್ನು ವಿಕ್ರಯ ಮಾಡಿ ಕೊಳ್ಳುವಳೇ? ಇರಲಿ ಆ ನೀಚ ದೇವೇಂದ್ರನು ಯಾವ ಅಪರಾಧವನ್ನು ಮಾಡಿದನು? ಅದನ್ನು ಮೊದಲು ಹೇಳು.

**ನಾರದ:**—ಇನ್ನು ಮೊದಲಿನಿಂದಲೇ ಹೇಳುತ್ತೇನೆ. ನಾನೊಂದು ದಿವಸ ಇಂದ್ರ ಸಭೆಗೆ ಹೋಗಿ ಮಹಾನಂದೆಯ ಸ್ವರೂಪದ ವರ್ಣನೆಯನ್ನು ಮಾಡಿದೆನು.

**ಶಂಕರ:**—ಮಹಾನಂದೆ ಯಾರು?

**ನಾರದ:**—ಮೃತ್ಯುಲೋಕದ ನಂದಿಗ್ರಾಮದೊಳಗಿನ ವಿಶ್ವ-ಮೋಹಿನಿ ಎಂಬ ಗಣಿಕಾ ಸ್ತ್ರೀಯಳ ಕನ್ನಿಕೆಯು. ಅಂದರೆ ಜಗತ್ರಯದ ಜನನಿಯು. ಮಹಾದೇವರ ಭವಾನಿಯು.

**ಶಂಕರ:**—(ನಕ್ಕು) ಹೀಗೇನು? ಸರಿ ಸರಿ ನನ್ನ ಪಾರ್ವತಿಯು ಮೃತ್ಯುಲೋಕದಲ್ಲಿ ಧರಿಸಿದ ಹೆಸರೇನು? ಮಹಾನಂದೆಯು. ಎಷ್ಟು ಮಧುರ ವಾದ ಹೆಸರು. ಮಹಾನಂದಾ! ಮಹಾನಂದಾ! ಒಳ್ಳೇದು ಮುಂದೆ?

**ನಾರದ:**—ನಾನು ಮಾಡಿದ ವರ್ಣನೆಯು ಮಹೇಂದ್ರನಿಗೆ ಸಹನ ವಾಗಲಿಲ್ಲ. ಅವನು ಮಹಾನಂದೆಯನ್ನು ವಶಮಾಡಿಕೊಂಡು ಬರುವೆನೆಂದು ಪ್ರತಿಜ್ಞೆಯನ್ನು ಮಾಡಿ ಮೃತ್ಯುಲೋಕಕ್ಕೆ ಬಂದನು.

**ಶಂಕರ:**—(ಕೋಪಿಸಿ) ಎಲೋ ದುಷ್ಟಾ! ಇಂದ್ರಾ! ನಿಲ್ಲು! ಒಳ್ಳೇದು ಮುಂದೆ.

**ನಾರದ:**—ಆಮೇಲೆ ನಾನು ಮತ್ತು ತುಂಬರ ಸ್ವಾಮಿ, ಉಭಯ ತರು ವೇಷಾಂತರಮಾಡಿ, ನಾನು ನಾರ್ಯಾ ಎಂಬ ಹೆಸರಿನಿಂದ ದೇವೇಂದ್ರನ ಸೇವಕನಾಗಿಯೂ, ಮತ್ತು ತುಂಬರಸ್ವಾಮಿಯು ತುಂಬಾ ಎಂಬ ಹೆಸರಿನಿಂದ ಮಹಾನಂದೆಯ ದಾಸಿಯಾಗಿಯೂ, ಭೂಲೋಕದಲ್ಲಿ ವಾಸ ಮಾಡಿದೆವು.

**ಶಂಕರ:**—ಅದೇತಕ್ಕೆ?

**ನಾರದ**:—ನಾನು ಮಹೇಂದ್ರನ ಕಾರಸ್ಥಾನವನ್ನು ಮುರಿಯುವದಕ್ಕೆ; ಮತ್ತು ತುಂಬರ ಸ್ವಾಮಿಯು ಮಹಾನಂದೆಯ ಅಜ್ಞಾನವನ್ನು ಹೋಗಲಾಡಿಸುವದಕ್ಕೆ.

**ಶಂಕರ**:—(ಆನಂದದಿಂದ) ಬಹಳೇ ಉತ್ತಮ; ಒಳ್ಳೇದು ಮುಂದೆ.

**ನಾರದ**:—ಅಲ್ಲಿ ನಾನು ಹೋಗಲು ಬಹುತರ ನನ್ನ ಯಾವತ್ತೂ ಕೆಲಸವನ್ನು ಮಹಾನಂದೆಯ ಅಣ್ಣನಾದ ಬ್ರಹ್ಮಾನಂದನೇ ಮಾಡಿದನು.

**ಶಂಕರ**:—ಅದೇನು?

**ನಾರದ**:—ಅವನು ಮಹಾನಂದೆಯನ್ನು ಇಂದ್ರನ ದೃಷ್ಟಿಗೆ ಬೀಳಗೊಡದೆ ಅವಳ ಬದಲಾಗಿ, ಅವನಿಗೆ ಸದಾನಂದೆಯ ಪರಿಚಯುವನ್ನು ಮಾಡಿಕೊಟ್ಟನು.

**ಶಂಕರ**:—(ಆನಂದದಿಂದ) ಒಳ್ಳೇ ಮೋಸ ಮಾಡಿದನು. ಒಳ್ಳೇದು ಸದಾನಂದೆಯು ಯಾರು?

**ನಾರದ**:—ಮಹಾನಂದೆಯ ಜೇಷ್ಠ ಭಗಿನಿಯು ಸದಾನಂದೆಯು. ಅಂದರೆ ಶಂಕರನ ಶಿರೋಭಾಗದಲ್ಲಿರುವ ಗಂಗೆಯು.

**ಶಂಕರ**:—(ನಕ್ಕು) ಹೀಗೇನು? ಅಂತೂ ಈ ಸಪತ್ನಿಯರು ಒಂದೇ ಮನೆಯಲ್ಲಿಯೇ ಅಕ್ಕತಂಗಿಯರಾಗಿ ವಾಸಮಾಡಿರುವರೇನು?

**ನಾರದ**:—ಹೌದು ಆದರೆ ತಾವು ಯಾರೆಂಬದುದರ ಕಲ್ಪನೆಯೇ ಅವರಿಗೆ ತಿಳಿಯದು.

**ಶಂಕರ**:—ಹೇಗೆ ತಿಳಿದೀತು? ಹಾಗೆ ತಿಳಿದರೆ ನನ್ನ ಶಾಪದ ಮಹತ್ವವೇನು? ಒಳ್ಳೇದು ಮುಂದೆ.

**ನಾರದ**:—ಮುಂದೆ ಸದಾನಂದೆಯು ದಿನಾಲು ದೇವೇಂದ್ರನಿಗೆ ಶಯನಕಾಲಕ್ಕೆ ತಾಂಬೂಲದಲ್ಲಿ–ಅಮಲು ಬರುವಂತೆ ಮಾಡಿ, ಅವನ ಅಲಂಕಾರಗಳನ್ನು ಸೆಳೆಯುತ್ತಿದ್ದಳು. ಇದೇ ಕ್ರಮದಿಂದ ಅವನನ್ನು ಎರಡು ಮೂರು ದಿವಸಗಳಲ್ಲಿಯೇ ತೀರಾ ನಿರ್ಧನನ್ನು ಮಾಡಿದಳು.

**ಶಂಕರ**:—(ಆನಂದದಿಂದ) ಬಹಳೇ ಉತ್ತಮವಾಯಿತು. ಮುಂದೆ?

**ನಾರದ**:—ಮೂರನೇ ದಿವಸ ಅವನಿಗೆ ಸಂಶಯು ಉತ್ಪನ್ನವಾಯಿತು. ಆಗ್ಗೆ ನಾನು ಈಕೆಯು ಸದಾನಂದೆಯು-ಮಹಾನಂದೆಯು ಅಲ್ಲವೆಂದು ಸ್ಪಷ್ಟವಾಗಿ ಹೇಳಿದೆನು. ಆಗ್ಗೆ ಅವನು ನನಗೆ ನಿಜವಾದ ಮಹಾನಂದೆಯನ್ನು ಕರೆತರುವದಕ್ಕೆ ಹೇಳಲು ನಾನು ಕರೆದುಕೊಂಡು ಬಂದೆನು. ಆಗ್ಗೆ ಅವಳ ಸೌಂದರ್ಯವನ್ನು ನೋಡಿ ಮೋಹಿತನಾಗಿ ದೇವೇಂದ್ರನು ಅವಳ ಮೇಲೆ ಬಲಾತ್ಕಾರ ಮಾಡಲಿಕ್ಕೆ ಹೋದನು.

**ಶಂಕರ**:—(ಸಿಟ್ಟಿಂನಿದಾ) ಎಲೋ ದುಷ್ಟಾ; ಸುರಾಧಮಾ ನಿಲ್ಲು! ಒಳ್ಳೇದು ಮುಂದೆ!

**ನಾರದ**:—ಮುಂದೆ-ಮಹಾನಂದೆಯು ಕ್ರೋಧಾಯುಕ್ತದೃಷ್ಟಿಯಿಂದ ದೇವೇಂದ್ರನನ್ನು ನೋಡಿದ ಕೂಡಲೇ, ಅವನ ಸಹಸ್ರನೇತ್ರಗಳು ದಗ್ಧವಾಗಿ ಅವನು ಕೆಳಗೆ ಬಿದ್ದನು.

**ಶಂಕರ**:—(ಆನಂದದಿಂದ)ಉತ್ತಮ. ಬಹಳೇ ಉತ್ತಮವಾಯಿತು. ಅಪರಾಧಕ್ಕೆ ತಕ್ಕ ಶಾಸನವಾಯಿತು. ದೇವೇಂದ್ರನಿಗೆ ನಾನೇ ಶಾಸನ ಮಾಡತಕ್ಕವನಿದ್ದೆ; ಆದರೆ ನನ್ನ ಕಾರ್ಯಭಾಗವನ್ನು ನನ್ನ ಪ್ರಿಯಳೇ ಮಾಡಿದಳು.

**ನಾರದ**:—ಹಾಗಾದರೆ ಇನ್ನುಮೇಲೆ ದೇವೇಂದ್ರನಿಗೆ ನೀವೇನೂ ಶಾಸನ ಮಾಡುವದಿಲ್ಲಾ.

**ಶಂಕರ**:—ಛೇ ಛೇ ಒಮ್ಮೆ ಶಾಸನವಾದರೆ ಸಾಕು.

**ನಾರದ**:—ಹಾಗಾದರೆ ತಾತಾ ಅದೋ ನೋಡಿರಿ. ದೇವೇಂದ್ರನು ತಮಗೆ ಕ್ಷಮೆಯನ್ನು ಬೇಡುವದಕ್ಕೆ ಬಂದಿರುವನು.

**ಶಂಕರ**:—(ರೋಷದಿಂದ) ನನ್ನ ಪ್ರಾಣವಲ್ಲಭೆಯ ಮೇಲೆ ಪಾಪದೃಷ್ಟಿಯನ್ನು ಇಡುವಂಥ ನೀಚ ಸುರಾಧಮನು ಇವನೇ ಏನು?

ರಾಗ ಅಡಾಣ, ತಾಳ ತ್ರಿವಟ.

**ಈತನೇ ನೀಚ ಖಲ ಮಘವಾ। ಗರ್ವದಲಿ ಮೆರೆವಾ। ದುರುಳತನಗೈವಾ॥ ಪಾತಕಿ ತಸ್ಕರ ಕೃತಿಯ ತಾ ಮಾಡುತೇ। ಅಹಿಯು**

**ಭಕ್ಷಿಪ ಮಂಡೂಕದೋಲ್ ॥ ಪಲ್ಲ॥ ಗೌರೀ ಸಹ ಹರಿಪಾದ ಸಂಭವೇ । ಗರುವದಿ ವಾರಾಂಗನೆಯುರಾದರೂ॥ ಧರೆಯೊಳವಲೋಕಿಸೀ ನರವೇಷವನ್ನು ಧರಿಸಿ। ಮಾರನಕೇಳಿಗೆ ಮಾತೆಯ ಸೇರಿದ। ಅಂಧಪುತ್ರನಂತೇ ॥ ೧॥**

**ಇಂದ್ರ:**—(ಪಾದಗಳಿಗೆ ನಮಸ್ಕಾರಮಾಡಿ) ಹೇ! ಷಡ್ಗುಣೈಶ್ವರ್ಯ ಸಂಪನ್ನನಾದ ದೇವಾಧಿದೇವಾ! ಮಹಾದೇವಾ! ನಾನು ಅಪರಾಧಗಳನ್ನು ಮಾಡಿದ್ದರಿಂದ, ಆದಿಶಕ್ತಿಯಾದ ಆದಿಮಾಯೆಯು ನನಗೆ ಯೋಗ್ಯ ಶಾಸನ ಮಾಡಿರುವಳು. ಇದು ನನ್ನ ಮೇಲೆ ಅವಳ ಅನುಗ್ರಹವೇ ಸರಿ. ಏಕಂದರೆ? ನನಗೆ ಈ ಶಿಕ್ಷೆಯನ್ನು ಮಾಡದಿದ್ದರೆ, ಅಧರ್ಮದಿಂದ ವರ್ತಿಸಿದ ಬಗ್ಗೆ ಅಧೋಗತಿಯನ್ನು ಭೋಗಿಸಬೇಕಾಗುತ್ತಿತ್ತು. ವಿಶ್ವೇಶ್ವರಾ, ಆ ಶಾಸನದಿಂದ ನನ್ನ ಸರ್ವಪಾತಕವೂ ನಾಶವಾಗಿ ನನಗೆ ತಮ್ಮ ಚರಣಕಮಲಗಳ ದರ್ಶನವಾಯಿತು. ನನ್ನನ್ನು ರಕ್ಷಣ ಮಾಡಬೇಕೆಂದು ಬೇಡಿಕೊಳ್ಳುತ್ತೇನೆ.

**ನಾರದ:**—ತಾತಾ ಈ ದೇವೇಂದ್ರನು ಮಾತೋಶ್ರೀಯ ಶಾಸನದಿಂದಲೂ, ಮತ್ತು ಕೃತಕರ್ಮದ ಪಶ್ಚಾತ್ತಾಪದಿಂದಲೂ, ಶುದ್ಧನಾಗಿರುವನು. ಅವನ ಮೇಲೆ ಕೃಪೆಯನ್ನುಮಾಡಿ, ಅವನ ದೇಹವನ್ನು ಮತ್ತು ನೇತ್ರಗಳನ್ನು ಪವಿತ್ರಮಾಡಿ, ಅವನನ್ನು ಅವನ ಸ್ಥಾನಕ್ಕೆ ಕಳಿಸಿಕೊಡಬೇಕು. ಇಷ್ಟೇ ಈ ಬಾಲಕನ ವಿನಯದ ಪ್ರಾರ್ಥನೆಯು.

**ಶಂಕರ:**—ಒಳ್ಳೇದು. ನಿನ್ನ ಇಚ್ಛೆಯಂತೆ ಆಗಲಿ. ದೇವೇಂದ್ರಾ ನೀನು ವೈಕುಂಠವಾಸಿಯಾದ ಮಹಾ ವಿಷ್ಣುವಿನ ಪ್ರತಿನಿಧಿಯು. ಅವನು ನಿನ್ನ ಮೇಲೆ ಸಂತುಷ್ಟನಾಗಿ ನಿನಗೆ ಸ್ವರ್ಗದ ರಾಜ್ಯವನ್ನು ಕೊಟ್ಟಿರುವನು. ನಿನ್ನ ಅಧಿಕಾರವು ಸರ್ವ ದೇವತೆಗಳ ಮೇಲೆ ನಡೆಯುಹತ್ತಿತು. ಆಗ್ಗೆ ನೀನು ಮೃತ್ಯುಲೋಕದ ಜನರಲ್ಲಿ ಏನೂ ಸತ್ವವಿಲ್ಲಾ; ಅವರ ಮೇಲೆ ಬೇಕಾದಂತೆ ಬಲಾತ್ಕಾರ ಮಾಡಿದರೆ ಅವರೇನು ಮಾಡುವರು. ಹೀಗೆ ಅಹಂಕಾರದಿಂದ ನೀನು ಒಬ್ಬ ವ್ಯಕ್ತಿಯ ಮೇಲೆ ಬಲಾತ್ಕಾರ ಮಾಡುವದಕ್ಕೆ ಹೋದೆ. ಅದರ ಪರಿಣಾಮವು ಹೇಗಾಯಿತೆಂಬುವದು ನಿನ್ನ ಅನುಭವಕ್ಕೆ ಬಂದಿರುವದು.

ಆದರೆ ಇದನ್ನು ಲಕ್ಷದಲ್ಲಿಡು. ಮೃತ್ಯುಲೋಕದಲ್ಲಿ ನಿನ್ನ ಸ್ವರ್ಗದಲ್ಲಿಯ ದೇವತೆಗಳಿಗಿಂತಲೂ, ಅಧಿಕವಾದ ಶಕ್ತಿವಂತ ಜನರು ಇರುವರು. ಅವರಿಗೆ ಅನ್ಯಾಯದ ಛಲನೆಯಿಂದ ನಿಜವಾದ ಕೋಪವು ಪ್ರಾಪ್ತವಾದರೆ, ಅವರು ನಿನ್ನಂತಹ ಮಹಾ ವಿಷ್ಣುವಿನ ಪ್ರತಿನಿಧಿಯನ್ನೂ ಕೂಡ ನಿರ್ಮೂಲವಾಡಿ ಬಿಡುವರು. ಅಂದ ಮೇಲೆ ನಿನ್ನ ಉಳಿದ ದೇವತೆಗಳ ಪಾಡೇನು? ಆದ್ದರಿಂದ ನೀನು ಮೃತ್ಯುಲೋಕದ ಮನುಷ್ಯರ ಗೊಡವೆಗೆ ಇಂದಿನಿಂದ ಹೋಗಬೇಡಾ! ಎಲೋ ಶೃಂಗಿ ಭೃಂಗಿ ಭದ್ರ ಭೈರವ ಈ ದೇವೇಂದ್ರನನ್ನು ಎತ್ತಿಕೊಂಡು ಧರ್ಮಕುಂಡದಲ್ಲಿ ಎಸೆಯಿರಿ. ಅಂದರೆ ಅವನ ಪಂಚಭೂತಾತ್ಮಕ ದೇಹವು ಪಂಚತತ್ವವನ್ನು ಹೊಂದಿ ಅವನು ತನ್ನ ದಿವ್ಯದೇಹವನ್ನು ಪಡೆದು ಸ್ವರ್ಗಕ್ಕೆ ಹೋಗುವನು. (ನಾಲ್ಕು ಗಣಗಳು ಅವನನ್ನು ಎತ್ತಿಕೊಂಡು ಹೋಗುವರು)

**ನಾರದ:**—ಪುರಂಧರ ಸೇಡಜಿಗಳೇ! ನಮ್ಮ ಧಣಿಯರೇ, ನಿಮಗೆ ನೀರಿನಲ್ಲಿ ಪ್ರಾಣತ್ಯಾಗ ಮಾಡಬೇಕಾಗಿರುವದಲ್ಲವೇ? ಹೋಗಿರಿ ಏನೂ ಸಂಕೋಚವಿಲ್ಲದೆ ಹೋಗಿರಿ.

**ಇಂದ್ರ:**—ದೇವಋಷಿಗಳೇ? ಇನ್ನೂ ಏನಾದರೂ ನಮ್ಮ ದುರ್ದಶೆ ಮಾಡುವದಿದ್ದರೆ ಈಗಲೇ ತೀರಿಸಿಕೊಳ್ಳಿರಿ (ಇಂದ್ರನನ್ನು ಕರಕೊಂಡು ಹೋಗುವರು.)

**ನಾರದ:**—ತಾತಾ ಆಗಲೇ ತಾವು ಮಾತೋಶ್ರೀಗೆ ರತ್ನಕಾಂಚನ ಅಲಂಕಾರಗಳು ಮೂಲತಃ ಸೇರುವದಿಲ್ಲೆಂದು ಹೇಳಲಿಲ್ಲವೇ? ಆದರೆ ಹಾಗಲ್ಲ. ಅಲ್ಲಿ ಅವರಿಗೆ ದ್ರವ್ಯದವಿನಃ ಮತ್ತೇನು ಕಾಣಿಸುವದಿಲ್ಲಾ. ಯಾವನು ಪೃಥ್ವಿಗೆ ಸರಿಯಾದ ಬೆಲೆಯುಳ್ಳ ಕಂಕಣವನ್ನು ತಂದುಕೊಡುವನೋ, ಅವನೇ ಯಜಮಾನನೆಂದು ತಿಳಿದು, ಅವನ ಕೂಡ ಪಾತಿವೃತ್ಯ ಧರ್ಮದಿಂದ ನಡೆಯತಕ್ಕದ್ದೆಂದು ಪಂಥವನ್ನು ಮಾಡಿರುವರು.

**ಶಂಕರ:**—ಪೃಥ್ವಿಗೆ ಸರಿಯಾದ ಬೆಲೆಯುಳ್ಳ ಕಂಕಣವೇ? ಮತ್ತೂ ಪಾತಿವೃತ್ಯಧರ್ಮದಿಂದ ನಡೆಯುವದೇ? ಒಳ್ಳೇದು ಆ ಕಂಕಣವನ್ನು ಒಬ್ಬ ಕುರೂಪಿಯೂ, ವೃದ್ಧನೂ, ತಾಪಸಿಯೂ, ರೋಗಿಷ್ಟನೂ, ದರಿದ್ರನೂ ಆದ ಮನುಷ್ಯನು ತಂದುಕೊಟ್ಟರೆ?

**ನಾರದ**:—ತೀರಾ ಅಶಕ್ಯವು! ಯಾವನು ವಾರಾಂಗನೆಯ ಪ್ರಾಪ್ತಿಗೋಸ್ಕರ ಪೃಥ್ವಿಗೆ ಸರಿಯಾದ ಬೆಲೆಯುಳ್ಳ ಕಂಕಣವನ್ನು ತಂದು ಕೊಡುವನೋ ಅವನು ಸುಸ್ವರೂಪನೂ, ತರುಣನೂ, ಸಶಕ್ತನೂ, ಶ್ರೀಮಂತನೂ, ಇರತಕ್ಕವನೇ.

**ಶಂಕರ**:—ಹಾಗೆ ಇರದೆ ನಾನು ಹೇಳುವಂತೆ ಇದ್ದರೆ?

**ನಾರದ**:—ಹಾಗೆ ಎಂದಿಗೂ ಇರಲಾರನು. ವೃದ್ಧನಾದವನು ನಾಯಕ ಸಾನಿಯ ಮನೆಗೆ ಏತಕ್ಕೆ ಹೋದಾನು? ಮತ್ತು ದ್ರಿದ್ರನಾದವನು ಪೃಥ್ವಿಗೆ ಸರಿಯಾದ ಕಂಕಣವನ್ನು ಎಲ್ಲಿಂದ ತಂದು ಕೊಟ್ಟಾನು?

**ಶಂಕರ**:—ಆದರೆ ನನ್ನಂಥವನು ಇಂತಹ ರೂಪವನ್ನು ಧರಿಸಿಕೊಂಡು, ಕಂಕಣವನ್ನು ಒಯ್ದು ಕೊಟ್ಟರೆ?

**ನಾರದ**:—ಕೊಟ್ಟರೆ–ಅದಕ್ಕೆ ಅವರು ಸಮ್ಮತಿಸುವರು ಮತ್ತು ತಮ್ಮ ಕೂಡ ಪಾತಿವ್ರತ್ಯದಿಂದ ನಡೆಯುವರು.

**ಶಂಕರ**:—ಅಂದ ಮೇಲೆ ನಾನೇ ಹೋಗಿ, ಕಂಕಣವನ್ನು ಕೊಡುತ್ತೇನೆ. ಮತ್ತೂ ಅವಳು ಹೇಗೆ ಪಾತಿವ್ರತ್ಯ ಧರ್ಮದಿಂದ ವರ್ತಿಸುವಳೋ ನೋಡುತ್ತೇನೆ.

**ನಾರದ**:—ಛೇ ಛೇ! ತಾವು ಇಂತಹ ಹವ್ಯಾಸಕ್ಕೆ ಬೀಳಬೇಡರಿ. ಅಪಜಯವಾಗಿ ತಿರುಗಿ ಬರಬೇಕಾದೀತು.

**ಶಂಕರ**:—ಅಂದ ಮೇಲೆ ನಾನು ಹೋಗಿ ಇದರ ಪರೀಕ್ಷೆ ಮಾಡತಕ್ಕವನೇ. ಎಲೈ ಗಣಾಧಿಪರೇ, ನಡೆಯಿರಿ ಹೋಗೋಣ.

**ನಾರದ**:—ನಿಮ್ಮ ಜೊತೆಯಲ್ಲಿ ಈ ಪಟಾಲಮುವೇತಕ್ಕೆ? ಮಾತೋಶ್ರೀ ಕೋಪದಿಂದ ತಮಗೆ ಏನಾದರೂ ಚಿಂತೆ ಇಲ್ಲಾ. ಏಕಂದರೆ ಶಿವನು ಶಕ್ತಿಯನ್ನು ಜಯಿಸಿದರೇನು, ಅಥವಾ ಶಕ್ತಿಯು ಶಿವನನ್ನು ಜಯಿಸಿದರೇನು? ಎರಡೂ ಒಂದೇ. ಇನ್ನು ತಮ್ಮ ಜೊತೆಗೆ ಯಾರಾದರೂ ಬೇಕಾಗಿದ್ದರೆ ನಾನು ಬರುತ್ತೇನೆ.

**ಶಂಕರ**:—ಏತಕ್ಕೆ? ಬೇಡಾ. ದೇವೇಂದ್ರನ ಸೇವಕನಾದಾಗ್ಯೆ ಉತ್ತಮವಾದ 'ವಸ್ತುಗಳು, ಸುಗ್ರಾಸಭೋಜನವೂ ನಿನಗೆ ದೊರೆಯುತ್ತಿರಬಹುದು. ಆದರೆ ನಾನು ದೇವೇಂದ್ರನ ವಿರುದ್ಧವಾಗಿ ದರಿದ್ರವೇಷ ಧರಿಸಿ ಹೋಗತಕ್ಕವನು.

**ನಾರದ**.—ಆದರೂ ಚಿಂತೆಯಿಲ್ಲಾ. ತಾವು ಭಿಕ್ಷೆಬೇಡುವದಕ್ಕೆ ಸಿದ್ಧರಾದ ಮೇಲೆ ನಾನೂ ಜೋಳಿಗೆ ಹಿಡಿಯುತ್ತೇನೆ.

**ಶಂಕರ**:—ನಾರದಾ! ಆದರೆ ಇದೊಂದು ಮಾತು ಲಕ್ಷ್ಯದಲ್ಲಿಡು! ನನ್ನ ಪಾರ್ವತಿಯು ಬಿಲ್ಲಣಿಯ ರೂಪವನ್ನು ಧರಿಸಿದ ಕಾಲಕ್ಕೆ, ನನ್ನನ್ನು ಮೋಸಗೊಳಿಸಬೇಕೆಂದು, ನೀನು ಅವಳಿಗೆ ಹೇಗೆ ಸಹಾಯಮಾಡಿದೆಯೋ, ಅದರಂತೆ ನನಗೂ ಸಹಾಯ ಮಾಡುವಂತಿದ್ದರೆ, ನನ್ನ ಸಂಗಡ ನಡೆ. ಅಲ್ಲದೆ ನನ್ನ ಕಾರ್ಯದಲ್ಲಿ ಸಹಾ ತೊಂಡರೆ ಮಾಡಬೇಕೆಂದು ನಿನ್ನ ಮನಸ್ಸಿನಲ್ಲಿದ್ದರೆ, ನಿನ್ನ ಸಹವಾಸವೇ ನನಗೆ ಬೇಡಾ; ಇಗೋ! ನಿನಗೆ ನಮಸ್ಕಾರ!

**ನಾರದ**:—ಛೇ. ಛೇ. ದೇವಾ ಈ ಬಾಲಕನ ವಿಷಯದಲ್ಲಿ ತಾವು ಲೇಶಮಾತ್ರವಾದರೂ ಸಂಶಯ ತೆಗದುಕೊಳ್ಳಬೇಡಿ.

**ಶಂಕರ**:—ಎಲೋ! ನಂದೀ, ಶೃಂಗೀ, ಭೃಂಗಿ, ಭದ್ರಾ, ಭೈರವಾ ಮೃತ್ಯುಲೋಕದಲ್ಲಿ ಪಾರ್ವತಿಯು, ವಾರಾಂಗನೆಯರೂಪವನ್ನು ಧರಿಸಿ, ಪಾತಿವೃತ್ಯದ ಹುಚ್ಚು ಮಂಡಿಸಿರುವಳು. ನಾನು ಅವಳ ಸತ್ವವನ್ನು ಹರಣ ಮಾಡುವದಕ್ಕೆ ಹೋಗುತ್ತೇನೆ. ಈ ಪ್ರಸಂಗದಲ್ಲಿ, ನನಗೆ ನಿಮ್ಮ ಸಹಾಯವು ಯಾವ ಸಮಯಕ್ಕೆ ಬೇಕಾಗುವದೋ, ಅದರ ನಿಯಮವಿಲ್ಲ. ಆದ್ದರಿಂದ ನೀವು ಯಾವಾಗಲೂ ಜಾಗ್ರತರಾಗಿರಬೇಕು. ಮತ್ತು ಯಾವ ಕಾಲಕ್ಕೆ ನಾನು ನಿಮ್ಮನ್ನು ಸ್ಮರಿಸುವೆನೋ, ಆ ಕಾಲಕ್ಕೆ ಆ ಸ್ಥಳದಲ್ಲಿ ಪ್ರಕಟವಾಗಿ, ನಾನು ಹೇಳಿದ ಕಾರ್ಯವನ್ನು ಮಾಡಬೇಕು. ಯಾವನು ಇದಕ್ಕೆ ತಪ್ಪಿ ನಡೆಯುವನೋ, ಅವನು ನನ್ನ ಕ್ರೋಧಾಗ್ನಿಗೆ ಬಲೆ ಬೀಳಬೇಕಾಗುವದು!

**ನಂದಿ**:—ದೇವಾಧಿದೇವಾ! ತಾವು ಮಾತೋಶ್ರೀಯರನ್ನು ಕರೆದುಕೊಂಡು ಬರುವವರೆಗೆ ನಾವು ಹೀಗೇ ಭಜನೆಮಾಡುತ್ತಾ ಇರುವೆವು.

ಬೇಂಡ್ ಚಾಲೀ.

ಶಂಭೋ ಶಿವಹರ। ಅಹಿಧರಾ । ಗಿರಿಧರಾ । ಗರಲಧರಾ ರುದ್ರಾ ಓಂಕಾರಾ । ತ್ರಿಪುರ ಹರ ಹರ ಹರ ॥ಪಲ್ಲ॥ ಸಕಲ ಭುವನ ನಮಿತ ಮುನಿಜನಾರ್ಚಿತ ಸುಪಾದಾ । ನೀ ಶ್ರುತಿ ಸ್ಮೃತೀ । ನುತ ವಿಹಾರಾ । ನಗಸುತೆಯನು ತವಕದಿಂದ । ಪೊಂದಿ ಗಣಕೆ ಸುಖವನೀಯೋ ॥ ೧ ॥

೨ನೇ ಅಂಕು ಮುಗಿದುದು.

# ಪಾರ್ವತೀ ಸತ್ವಪರೀಕ್ಷೆ

## ತೃತಿಯಾಂಕ

---

### ಪ್ರಥಮರಂಗ ವಿಶ್ವಮೋಹಿನಿಯ ಮನೆ

( ವಿಶ್ವಮೋಹಿನಿ, ಬ್ರಹ್ಮಾನಂದ, ಮಹಾನಂದಾ, ತುಂಬುರ ಇರುವರು. )

**ವಿಶ್ವ:**—ಒಳ್ಳೇದು ನಿನ್ನ ಅಭಿಪ್ರಾಯದಂತೆ, ಪೃಥ್ವಿಗೆ ಸರಿಯಾದ ಬೆಲೆಯುಳ್ಳ ಕಂಕಣವನ್ನು ಹೀಗೇ ಯಾವನಾದರೊಬ್ಬ ಮುದುಕ ಮನುಷ್ಯನು ತಂದುಕೊಟ್ಟರೆ.

**ಬ್ರಹ್ಮ:**—ತಂದುಕೊಟ್ಟರೇನು? ವೃದ್ಧಪತಿ ತರುಣಸತಿ ಇವರಿಬ್ಬರ ಜೊತೆ ಅಂದರೆ ತೊವ್ವೆಅನ್ನ.

**ಮಹಾ:**—ಅಣ್ಣಾ! ತೊವ್ವೆಅನ್ನವಂದರೇನು ?

**ಬ್ರಹ್ಮ:**—ಅಂದರೆ, ಒಳ್ಳೇ ಉತ್ತಮವಾದ ಸಣ್ಣಕ್ಕಿ ಉದರನ್ನ-ಅದರ ಮೇಲೆ ಸಪ್ಪನ ಬೇಳೆ ತೊವ್ವೆ.

**ವಿಶ್ವ:**—ಸಾಕು ಸುಮ್ಮನಿರು. ಇನ್ನು ಮೇಲೆ ನೀವು ಯಾರೊಬ್ಬರು ಚೇಷ್ಟೆಯನ್ನು ಮಾಡಬೇಡಿರಿ. ಮಹಾನಂದೇ, ನಾನು ನಿನ್ನನ್ನು ನಿಜವಾದ ಮನೋಭಾವದಿಂದ ವಿಚಾರಿಸುತ್ತೇನೆ. ನಿನ್ನಂತಹ ಲಾವಣ್ಯವತಿಗೆ ಯಾವನಾದರೊಬ್ಬ ಕುರೂಪಿವೃದ್ಧ ಮನುಷ್ಯನು ಭೆಟ್ಟಿಯಾದರೆ?

**ತುಂಬುರ:**—ಭೆಟ್ಟಿಯಾದರೇನು? ಅವನೇ ಪ್ರಾಣಪತಿ ಎಂದು ತಿಳಿದು ಅವನ ಕೂಡಾ ಪಾತಿವೃತ್ಯಧರ್ಮದಿಂದ ವರ್ತಿಸುವದು.

**ವಿಶ್ವ:**—ಸಾಕು ಸಾಕು. ಇಬ್ಬರು ಮಾತಾಡುವ ಕಾಲಕ್ಕೆ ಮೂರನೇಯವರು ಮಧ್ಯದಲ್ಲಿ ಬಾಯಿ ಹಾಕಬಾರದು.

**ಮಹಾ**:—ಅದೇಕೆ ಗೆಳತಿ, ನನ್ನಗೋಸ್ಕರವಾಗಿ ನೀನೇ ಅಮ್ಮನಿಗೆ ಉತ್ತರವನ್ನು ಕೊಡು.

**ವಿಶ್ವ**:—ಅಂದರೆ! ನನ್ನ ಕೂಡ ಮಾತಾಡುವದಕ್ಕೆ ಸಹ ಮನಸಿಲ್ಲವೇ?

**ಮಹಾ**:—ಅಮ್ಮಾ ಹಾಗಲ್ಲ; ನನಗೆ ಹೇಳಿದ್ದನ್ನು ಹೇಳುವದಕ್ಕೆ ಬೇಸರಬರುವದು.

**ವಿಶ್ವ**:—ಇದೋ ನೋಡು! ನೀನು ಪೃಥ್ವಿಗೆ ಸರಿಯಾದ ಬೆಲೆಯುಳ್ಳ ಕಂಕಣವನ್ನು ತಂದುಕೊಟ್ಟವನನ್ನು, ಪತಿಯನ್ನಾಗಿ ವರಿಸುವೆನೆಂದು ಪಂಥ ಮಾಡಿರುತ್ತಿ. ಆ ಕಂಕಣವನ್ನು ಒಬ್ಬ ಕೂರೂಪಿವೃದ್ಧ ಮನುಷ್ಯನು ತಂದು ಕೊಟ್ಟರೆ ಅವನನ್ನು ವರಿಸುವಿಯಾ?

**ಮಹಾ**:—ಓಹೋ ವರಿಸತಕ್ಕವಳೇ! ವೃದ್ಧಮನುಷ್ಯರಿಗೆ ಸ್ತ್ರೀಯರ ಅವಶ್ಯಕತೆಯು ಹೆಚ್ಚು! ಅವರಿಗೆ ನೆಟ್ಟಗೆ ನಡೆಯಲಿಕ್ಕೆ ಬರುವದಿಲ್ಲಾ; ಆಗ್ಗೆ ನಾನು ಅವರ ಕೈಯೊಳಗಿನ ಕೋಲಿನಂತೆ ಅವರ ಉಪಯೋಗಕ್ಕೆ ಬರುವೆನು. ತರುಣರಿಗಿಂತಲೂ ವೃದ್ಧರಿಗೆ ನಾನು ಹೆಚ್ಚು ಉಪಯೋಗವಾಗುವೆನು. ಮತ್ತೂ ನನ್ನ ಪಾತಿವೃತ್ಯವನ್ನು, ಅವರ ಸಹವಾಸದಲ್ಲಿಯೇ ಹೆಚ್ಚು ಹೊರೆಗಾಣಿಸುವೆನು.

**ತುಂಬುರ**:—(ಸ್ವಗತ) ನವಣಕ್ಕಿ ಅನ್ನ ಪಂಕ್ತಿಗೆ, ವೃದ್ಧಪತಿಯು ವಿನೋದಕ್ಕೆ, ಹೀಗೆ ತಿಳಿಯುವಂಥ ಸ್ತ್ರೀಯರು ಇದನ್ನು ಚನ್ನಾಗಿ ಲಕ್ಷ್ಯದಲ್ಲಿಡಬೇಕು.

**ವಿಶ್ವ**:—ಒಳ್ಳೇದು ಅವನು ಕುರುಡನಾಗಿದ್ದರೆ?

**ಮಹಾ**:—ಇದ್ದರೆ, ಗಾಂಧಾರಿದೇವಿಯಂತೆ ನನ್ನ ಕಣ್ಣುಗಳನ್ನು ಕಟ್ಟಿಕೊಂಡೇನು. ಅಥವಾ ಅವರ ನೇತ್ರಗಳ ಕೆಲಸವನ್ನು ನನ್ನ ನೇತ್ರಗಳು ಮಾಡುವವು.

**ತುಂಬುರ**:—ಗಂಡನಿಗೆ ನಿದ್ರೆಹತ್ತಿದ ಕೂಡಲೇ ಕಣ್ಣು ತಪ್ಪಿಸಿ ಹೋಗುವ ಸ್ತ್ರೀಯರು, ಇದನ್ನು ಚನ್ನಾಗಿ ಕೇಳಬೇಕು.

**ವಿಶ್ವ**:—ಒಳ್ಳೇದು ಅವನು ಬಧಿರನಾಗಿದ್ದರೆ?

**ಮಹಾ**:—ಭಾವೀಸುಖದುಃಖದ ಸೂಚನೆಯನ್ನು ನಾನು ಅವರಿಗೆ ಸ್ಪರ್ಶಜ್ಞಾನದಿಂದ ತಿಳಿಸುತ್ತ ಹೋಗುವೆನು.

**ತುಂಬುರ**:—ಕಿವುಡನಾದ ಗಂಡನಿಗೆ ಬಾಯಿಯಲ್ಲಿ ಒಂದೇಸವನೆ ಬೈಯ್ಯುವ ಸ್ತ್ರೀಯರು, ಹೀಗೆ ವರ್ತಿಸಬೇಕು.

**ವಿಶ್ವ**:—ಒಳ್ಳೇದು ಆತನು ರೋಗಿಯಾಗಿದ್ದರೆ?

**ಮಹಾ**:—ನಾನು ಕಾಲಕಾಲಕ್ಕೆ ಔಷಧ ಪಥ್ಯವನ್ನು ಕೊಟ್ಟು, ಅವರಿಗೆ ಬೇಗನೆ ಮನಸ್ಸಿಗೆ ಸೊಗಸಾಗುವಂತೆ ಮಾಡುವೆನು.

**ತುಂಬುರ**:—ಮತ್ತು ಯಾವ ಸ್ತ್ರೀಯರು ತಮ್ಮ ಗಂಡನಿಗೆ ಔಷಧ ದಲ್ಲಿ ವಿಷಪ್ರಯೋಗ ಮಾಡುವರೋ ಅವರ ಹೃದಯವು ಹೇಗಿರಬಹುದು?

**ವಿಶ್ವ**:—ಆದರೆ ಇಂಥ ದುರ್ಗುಣಗಳಿಂದ ಯುಕ್ತವಾದ ಒಂದು ಕಲ್ಲು ನಿನ್ನ ಉಡಿಯಲ್ಲಿ ಬಿದ್ದರೆ?

**ಮಹಾ**:—ಅದು ನನ್ನ ಆರಾಧ್ಯದೇವತೆಯ ಪ್ರತಿಮೆಯೆಂದು ತಿಳಿದು ಮನೋಭಾವದಿಂದ ಅವರ ಪೂಜೆಯನ್ನು ಮಾಡುವೆನು.

**ತುಂಬುರ**:—ಪ್ರತಿಯಾಗಿ ಗಂಡನಿಗೆ ಪೆಟ್ಟುಗಳನ್ನು ಹಾಕುವ ಸ್ತ್ರೀಯರು ಇದನ್ನು ಕೇಳತಕ್ಕದ್ದು.

**ವಿಶ್ವ**:—ಒಳ್ಳೇದು. ಅವನು ತಾಮಸಿಯೂ ತೊಂದರೆಕೊಡತಕ್ಕ ವನೂ ಇದ್ದರೆ?

**ಮಹಾ**:—ನಾನು ಮೇಲಿಂದ ಮೇಲೆ ಕ್ಷಮೆಯನ್ನು ಬೇಡಿ ಅವರ ಪ್ರೇಮವನ್ನು ಸಂಪಾದಿಸುವದಕ್ಕೆ ಪ್ರಯತ್ನ ಮಾಡುವೆನು.

**ತುಂಬುರ**:—ಗಂಡನಿಗೆ ಉತ್ತರಕ್ಕೆ ಪ್ರತ್ಯುತ್ತರವನ್ನು ಕೊಡುವ ಸ್ತ್ರೀಯರು, ಇದನ್ನು ಚನ್ನಾಗಿ ಲಕ್ಷ್ಯದಲ್ಲಿಡಬೇಕು.

**ವಿಶ್ವ**:—ಅವನು ಸದಾನಂದೆಯ ಯಜಮಾನನಂತೆ ಓಡಿ ಹೋದರೆ?

**ಮಹಾ**:—ನಾನೂ ಅವರ ಕೈಪಿಡಿದು ಓಡಿಹೋಗುವೆನು. ಅಲ್ಲದೆ

ಅವರು ನನ್ನನ್ನು ತೊಲಗಿ ಹೋದರೆ, ಮಹಾದೇವರ ದೇವಾಲಯದಲ್ಲಿದ್ದು ಉಳಿದ ಆಯುಷ್ಯವನ್ನು, ಅವರ ಪೂಜೆಯಲ್ಲಿಯೇ ಕಳೆಯುವೆನು.

**ತುಂಬುರ:**—ಒಬ್ಬ ಗಂಡನು ಸತ್ತರೆ ಮತ್ತೊಬ್ಬನು, ಅವನು ಹೋದರೆ ಮೂರನೇಯವನು, ಅವನು ಹೋದರೆ ನಾಲ್ಕನೇಯವನು, ಹೀಗೆ ಮಾಡುವಂಥ ಅಖಂಡ ಸೌಭಾಗ್ಯವತಿಯರು ಇದನ್ನು ಕೇಳಬೇಕು!

**ವಿಶ್ವ:**—ಶಂಕರನ ಮುಂದೆ ಸಹಸ್ರ ಮಹಾರುದ್ರ ಮಾಡಿಸಿದೆ. ಲಕ್ಷನಂದಾ ದೀಪಗಳನ್ನು ಹಚ್ಚಿದೆ. ಕೋಟಿ 'ಬ್ರಾಹ್ಮಣರ ಸಂತರ್ಪಣೆ ಮಾಡಿಸಿದೆ. ಅವನು ನನಗೆ ಇಂತಹ ಕನ್ಯಾರತ್ನವನ್ನು ಕೊಟ್ಟನು. ನಮ್ಮ ದುರ್ದೈವ! ಅದಕ್ಕೆ ದೇವರ ದೋಷವೇನು? ಮಹಾನಂದೆ ಮಾಡು, ನಿನಗೆ ಹೇಗೆ ತೋರುವದೋ ಹಾಗೆ ಮಾಡು. ಆದರೆ ಇದನ್ನು ಲಕ್ಷ್ಯದಲ್ಲಿಡು, ಈ ನನ್ನ ಮಾತುಗಳು ಮುಂದೆ ಎಂದಾದರೂ ನಿನಗೆ ಸ್ಮರಣಕ್ಕೆ ಬರಬಹುದು. ನಡಿಯರಮ್ಮಾ, ಎಲ್ಲರೂ ಹೋಗೋಣ. ನಮ್ಮಿಂದ ಅವಳಿಗೆ ತೊಂದರೆ ಏತಕ್ಕೆ! (ಹೋಗುವರು.)

**ಮಹಾ:**—ಗೆಳತೀ ತುಂಬಾ, ನಾವೀರ್ವರು ಸುಖಸಮಾಧಾನದ ಮಾತುಗಳನ್ನಾಡುವ ಕಾಲಕ್ಕೆ, ಮೇಲಿಂದ ಮೇಲೆ ಈ ಪ್ರಕಾರ ವಿಘ್ನಗಳು ಬರುತ್ತವೆ. ನಮ್ಮ ಬೆನ್ನಿಗೆ ಹತ್ತಿದ ಈ ತೊಂದರೆಯು ಹೇಗೆ ದೂರಾದೀತೆ? (ಆಕಾಶದಲ್ಲಿ ದುಂದುಭಿಧ್ವನಿಯು) ಗೆಳತೀ ಆಕಾಶದಲ್ಲಿ ದುಂದುಭಿಧ್ವನಿಯು ಏಕೆ ಆಗುತ್ತಿರಬಹುದು? ಇದು ಏನಾದರೂ ಅನಿಷ್ಟ ಸೂಚನೆ ಇರಬಹುದೇ.

**ತುಂಬುರ:**—ದುಂದುಭಿಧ್ವನಿಯು ಮಂಗಲ ಸೂಚಕವು. ಇದಲ್ಲದೆ ಪರಮೇಶ್ವರನು ನವೀನವಾದ ಅವತಾರ ಧಾರಣಮಾಡುವಾಗ್ಗೆ ಹೀಗೆ ಧ್ವನಿಯಾಗುವದು. ಅದಕ್ಕೆ ನೀನು ಭಯಪಡುವ ಕಾರಣವಿಲ್ಲಾ.

**ಮಹಾ:**—ಗೆಳತೀ, ನೀನು ಪ್ರತಿಯೊಂದು ಪ್ರಸಂಗದಲ್ಲಿಯೂ, ಮುಂದಾಗುವ ಸುಖದ ಬಗ್ಗೆ, ಬರಿಯ ಆಶ್ವಾಸನವನ್ನೇ ಕೊಡುತ್ತೀ. ಅದರಂತೆ ಒಂದೂ ಸಂಭವಿಸುವದಿಲ್ಲವಲ್ಲಾ.

**ತುಂಬುರ:**—ಏನೇ! ಒಳ್ಳೇ ಸಂಧಿಯು ಬರಬೇಕಾದರೆ, ಕಾಲದ ಅವಧಿಯು ಹೆಚ್ಚು ಬೇಕಾಗುವದು; ಮತ್ತೂ ಆ ಜಗನ್ನಿಯಾಮಕನು, ಭಕ್ತ ಪರೀಕ್ಷೆಯನ್ನು ಚನ್ನಾಗಿ ಮಾಡದವಿನಹ, ಮನೋರಥವನ್ನು ಎಂದಿಗೂ ಪೂರ್ಣಮಾಡಲಾರನು, ಮತ್ತೂ ಅದರೊಳಗಿನಿಂದ ನೀನು ಒಮ್ಮೆ ಪಾರಾದಿ ಎಂದರೆ....

**ಮಹಾ:**—ಗೆಳತಿ ನಿನ್ನ ಬಾಯಲ್ಲಿ ಸಕ್ಕರೆ ಬೀಳಲಿ!

**ಈಶ್ವರ:**—

ರಾಗ ಭೈರವಿ, ತಾಳ ಕೇರವಾ.

**ನಾನೇ ಬೇಡುವೆ। ಭಿಕ್ಷೆಯು ನೀಡಿ॥ ಅನುದಿನ ಯಶ ಸಂಪಾದನೆ ಮಾಡಿ॥ ಭಿಕ್ಷೆಯ ನೀಡಿ ॥ ಪಲ್ಲ॥ ಕಂದನ ವಧಿಸಿ ಜನನೀ ಪಕ್ವಾನ್ನಾ॥ ನಂದದಿ ಮಾಡಿ। ಭಿಕ್ಷೆಯ ನೀಡಿ ॥೧॥ ಸಾಧ್ವಿಯು ಸದನದಿ। ಪಾಕವ ಮಾಡಿ। ವಸನವ ತೊಲಗೀ। ಭಿಕ್ಷೆಯ ನೀಡೀ ॥೨॥**

**ಮಹಾ:**—ಹೊರಗೆ ಯಾರೋ ಭಿಕ್ಷುಕರು ಬಂದಿರುವಂತೆ ಕಾಣುವದು.

**ತುಂಬುರ:**—ದೇವಾಧಿದೇವನು ಬೇಗನೆ ನನ್ನ ಶಬ್ದಗಳು ಸತ್ಯವಾಗುವಂತೆ ಮಾಡಿದನು. (ದಿಟ್ಟಿಸಿ ನೋಡಿ) ಹೌದು ಅವರೇ, ವಿದ್ಯುತ್ತಿಯ ತೇಜಸ್ಸು, ಮಲಿನವಾದ ವಸ್ತ್ರಗಳಿಂದ ಮುಚ್ಚಿಕೊಂಡಿದ್ದರೂ, ಅದನ್ನು ಸ್ಪಷ್ಟವಾಗಿ ಗುರ್ತಿಸಲಿಕ್ಕೆ ಬರುವದು. ಮತ್ತೂ ಎರಡನೇಯವರು ಯಾರೆಂದರೆ, ನಮ್ಮ ನಾರದ ಸ್ವಾಮಿಗಳು; ಸವಾರಿಯು ದೇವೇಂದ್ರನನ್ನು ಗತಿಗಾಣಿಸಿ, ಮಹ ದೇವರನ್ನು ಕರೆದುಕೊಂಡು ಬಂದಂತೆ ಕಾಣುವದು.

**ಮಹಾ:**—ಅವರಿಗೆ ಬಡಿಸುವದನ್ನು ಬಿಟ್ಟು, ಹೀಗೆ ವಿಚಾರ ಮಾಡುತ್ತ ನಿಂತುಕೊಂಡರೆ ಬರುವದೇನು?

**ತುಂಬುರ:**—ಅವರು ಏನು ಬೇಡುತ್ತಾರೆ ಅದನ್ನು ಕೇಳಿದಿಯಾ? ಈ ಭಿಕ್ಷುಕರು ಏನೋ ಚಮತ್ಕಾರವಾಗಿ ತೋರುತ್ತಾರೆ.

**ಮಹಾ:**—ತಾವು ಏನು ಬಡಿಸಬೇಕಾಗಿರುವದೋ ಅದನ್ನು ಬಡಿಸಬೇಕು. ಅತಿಥಿಗಳ ದೋಷವನ್ನು ಎಣಿಸಬಾರದು.

**ತುಂಬುರ:**—ನಿನಗೆ ಸುಳ್ಳುಕಂಡರೆ ನೀನೇ ಅವರನ್ನು ಏನು ಬೇಕೆಂದು ವಿಚಾರಿಸು. ಎಲೈ ಭಿಕ್ಷುಕ ಜನರೇ! ನಿಮಗೆ ಏನು ಬೇಕಾಗಿದೆ ಎಂದು ನಮ್ಮ ದೇವಿಯರು ವಿಚಾರಿಸುತ್ತಾರೆ. (ವಿಶ್ವನೋಹಿನಿ–ಬ್ರಹ್ಮಾನಂದ-ಸದಾನಂದಾ–ಬರುತ್ತಾರೆ.)

**ವಿಶ್ವ:**—ಯಾರೋ, ನೀವು ಧೈರ್ಯಶಾಲಿಗಳು; ಹೆಣ್ಣುಮಕ್ಕಳ ಮುಂದೆ ಏನು ಬೇಡುತ್ತೀರೋ?

**ತುಂಬುರ:**—ಅಮ್ಮನವರೇ ಅವರು ಅನ್ನುವದೇನಂದರೆ ತಾಯಿಯು ಸ್ವಹಸ್ತದಿಂದ ಮಗನನ್ನು ಕೊಂದು, ಆ ಮಾಂಸವನ್ನು ಬೇಯಿಸಿ ಅವರಿಗೆ ಭೋಜನಕ್ಕಿಡಬೇಕಂತೆ.

**ವಿಶ್ವ:**—ಎಲೈ ಚಂಡಾಲರೇ! ಇದೇನು ಶಿರಿಯಾಳ ರಾಜನ ಮನೆಯೆಂದು ತಿಳಿದು ಸಣ್ಣ ಹುಡುಗನ ಮಾಂಸವನ್ನು ಬೇಡುವಿರಾ?

**ಬ್ರಹ್ಮ:**—ಇದೇನು ಕಟುಗರ ಮನೆಯೋ?

**ಸದಾ:**—ಅಲ್ಲದೆ ಮನುಷ್ಯರನ್ನು ಕೊಲ್ಲುವ ಕಾರಖಾನೆಯೋ?

**ನಾರದ:**—ಮನೆಗೆ ಬರತಕ್ಕ ಮನುಷ್ಯರ ಮೈಚರ್ಮವನ್ನು ಕೂಡಾ ಸುಲಿದುಕೊಂಡು, ಅವನ ಹೆಂಡರುಮಕ್ಕಳು, ಮೃತಪಟ್ಟಂತೆ ಮಾಡಿಬಿಡುತ್ತೀರಿ; ಅಂದ ಮೇಲೆ ಇದು ಮನುಷ್ಯರನ್ನು ಕೊಲ್ಲುವ ಕಾರಖಾನೆಯಲ್ಲವೇ?

**ತುಂಬುರ:**— ಅಮ್ಮನವರೇ, ಮತ್ತು ಅವರು ಅನ್ನುವದೇನಂದರೆ, ಸ್ತ್ರೀಯರು ಸ್ವಯಂಪಾಕಮಾಡಿ, ಉಟ್ಟಸೀರೆಯನ್ನು ಕಳೆದಿಟ್ಟು ಬಡಿಸಬೇಕಂತೆ.

**ವಿಶ್ವ:**—ಚಾಂಡಾಲರೇ! ನಮ್ಮ ಮನೆಯಲ್ಲಿ ಬತ್ತಲೆಯಾಗಿ ಪಿಶಾಚಿಗಳು ಕುಣಿಯುತ್ತವೆಯೋ? ಯಾಕೋ ನೀಚಾ! ಹೆಣ್ಣುಮಕ್ಕಳ ಮುಂದೆ, ಹೀಗೆ ತುಚ್ಛವಾದ ಮಾತುಗಳನ್ನಾಡುವದಕ್ಕೆ ನಾಚಿಕೆಯಾಗುವದಿಲ್ಲವೇ?

**ಈಶ್ವರ:--**

ರಾಗ ಕಾನಡಾ, ತಾಳ ತ್ರಿತಾಳ.

**ಆರು ಯನಗೀ ಜಗದಿ ಯಾರು ಗತಿ ಇಲ್ಲನ್ನೈ॥ ಈರ್ವ ಕಾಮಿನಿಯರೂ ಈರ್ವ ಸುತರಿರ್ದರೂ॥ ಧಾರುಣಿಯೊಳು ತಿರಿದು॥ ಬೇಡುವೆ ಭಿಕ್ಷೆಯಾ ॥ ೧॥ ತನುವಿಗಿಲ್ಲವು ವಸನ ನಿರ್ಧನನು ನಾನಿಹೇ ॥ ಮನೆಮಾರು ಇಲ್ಲದಲೆ। ವಾಸಿಪೆ ಸ್ಮಶಾನದಿ ॥ ೨ ॥**

**ಬ್ರಹ್ಮ:**--ಎಲೋ ಹುಚ್ಚಾ! ನಿನ್ನ ಹೆಂಡರುಮಕ್ಕಳು ನಿನ್ನನ್ನು ಬಿಟ್ಟು ಹೋದರು. ದೇವರು ನಿನ್ನನ್ನು ರೋಗಿಯನ್ನಾಗಿ ಮಾಡಿದನು. ಬಳಿಯಲ್ಲಿ ಬಾಯೊಳಗೆ ಹಾಕಿಕೊಳ್ಳುವದಕ್ಕೆ ಒಂದು ಕಾಸು ಕೂಡಾ ಇಲ್ಲ ವೆಂದು ಭಿಕ್ಷೆಯನ್ನು ಬೇಡುತ್ತಾ ಅಲೆಯುತ್ತೀ. ಜನರು ನಿನಗೆ ಸಂತೋಷ ದಿಂದ ಒಡಿಸಬೇಕಾದರೆ, ಮುಖದಿಂದಾ ಒಳ್ಳೇ ಮಾತುಗಳನ್ನಾದರೂ ಆಡಬಾರದೇ? ನಮ್ಮ ಹತ್ತಿರ ಮನುಷ್ಯರ ಮಾಂಸತಿನ್ನುವದಕ್ಕೆ ಬೇಡುತ್ತೀ. ನಾವೇನು ರಾಕ್ಷಸರೋ? ನಮ್ಮನ್ನು ಯಾರೆಂದು ತಿಳಿದಿರುವಿ?

**ಈಶ್ವರ:**--ನೀವು ಯಾರೆಂಬುವದು ನನಗೇನು ತಿಳಿಯುವದು.

**ವಿಶ್ವ:**--ಎಲೋ ನಾವು ವೇಶ್ಯೆಯರು ಈಗಾದರೂ ತಿಳಿಯಿತೇ?

**ಈಶ್ವರ:**--ನಾಯಕಸಾನಿಯರೋ? ಬಹಳ ಉತ್ತಮವಾಯಿತು.

ರಾಗ ಸಾರಂಗ, ತಾಳ ಕೇರವಾ.

**ವೇಶ್ಯ ನೀಡೆ। ಇಂಥಾ ಸುರಾಂಗನಾಸಮ ಸುಂದರಿಯಾ। ಸುಹಾಸ್ಯ ವದನಾ ಕಾಮಿನಿಯಾ। ಮೀನ ನೇತ್ರದಾ ಸತಿಯಾ। ದುರ್ಲಭ ದೇವ ದೈತ್ಯರಿಗೆ ॥ ಪಲ್ಲ ॥ ಸಾಧ್ವಿ ವೃತವ ಪಾಲಿಸುವೆ ಮೂರುದಿನ। ಪೂರೈಸಿರೆನ್ನಭಿಲಾಷೆಯಾ। ಸೀತಾ ತಾರಾ ಮಂಡೋದರಿ। ಅನುಸೂಯಾ ॥ ಮುನಿಭಾರ್ಯಾ ತತ್ಸಮ ಕುಲಭೂಷೆಯಾ ॥ ೧ ॥**

**ವಿಶ್ವ:**--ಇವನಿಗೆ ಮೂರ್ಖನೆನ್ನಬೇಕೋ? ಬುದ್ಧಿವಂತನೆನ್ನ ಬೇಕೋ? ಅಂತೆ ದೇವಾಂಗನಿಯರಿಗಿಂತಲೂ ಸುಂದರಿಯರಾದ, ವೇಶ್ಯಾಂಗ

ನಿಯರು ಬೇಕಂತೆ. ಈ ಮುದಿಹದ್ದಿಗೆ ನಾಯಿಕಸಾನಿಯ್ಯರು ಏತಕ್ಕೆ ಬೇಕೋ ?

**ಬ್ರಹ್ಮ**;--ಏಕಯ್ಯಾ ಮೂರ್ಖ ಸಿರೋಮಣಿಯೇ! ನಿನ್ನ ತಲೆ ತಿರುಗುವದೇನು! ಎಲೋ ಮೂರ್ಖಾ, ನಿನ್ನ ವಯಸ್ಸು ಹೋದವು! ವ್ಯಾಧಿಯಿಂದ ನಿನ್ನ ಶರೀರಕ್ಕೆ ತೂತುಬಿದ್ದು ಅದರೊಳಗಿಂದ ರಕ್ತಹರಿಯುತ್ತಿರುವದು. ಮೃತ್ಯುವು ಇಂದು ಬರುವದೋ, ನಾಳೆ ಬರುವದೋ ಅದರ ನೇಮವಿಲ್ಲಾ. ಏತಕ್ಕೋ ನಿನಗೆ ವಾರಾಂಗನೆಯರು ?

**ನಾರದ**:—ಏಕಂದರೆ? ನಮ್ಮ ಧನಿಯರ ಮನಸ್ಸಿನಲ್ಲಿ, ವೇಶ್ಯಾಂಗನೆಯರ ಹೊಸ್ತಲಕ್ಕೇ ಪ್ರಾಣಕೊಡಬೇಕಾಗಿರಬಹುದು.

**ಸದಾ**:--ಈಗ ನಿನ್ನ ಧನಿಯರು ದೇವಾಂಗನೆಯಂತೆ ಅಮೃತವನ್ನು ಕುಡಿಯುವ, ನಾಯಿಕಸಾನಿಯನ್ನು ಬೇಡುತ್ತಾರೆ. ಅವಳ ನಿರ್ವಾಹವು ಆ ಭಕ್ಕರಿ ಚೂರುಗಳ ಮೇಲೆಯೇ ಆಗಬೇಕೋ ?

**ವಿಶ್ವ**:--ಏನಾಃಕಾರಣ ಇದೇನು ಕಿಟಿಕಿಟಿಯೋ? ಇವರಿಬ್ಬರನ್ನು ಮನೆಯೊಳಗಿಂದ ಹೊರಗೆ ಹಾಕು.

**ಈಶ್ವರ**:--ಹೊರಗೆ ಏಕೆ ಹಾಕುತ್ತೀರಿ? ನನಗೆ ಮಹಾಪತಿವ್ರತೆಯಾದ ವಾರಾಂಗನೆಯು ಬೇಕಾಗಿರುವಳು.

**ವಿಶ್ವ**:--ವಾರಾಂಗನೆ ಇದ್ದು ಪತಿವ್ರತೆಯೆಂದೆನಿಸುವಂಥ, ನಿನ್ನಂತೆ ಒಬ್ಬ ಹುಚ್ಚ ಹುಡುಗಿಯು, ನಮ್ಮ ಮನೆಯಲ್ಲಿರುತ್ತಾಳೆ. ಅವಳಿಗೆ ಪೃಥ್ವಿಗೆ ಸರಿಯಾದ ಬೆಲೆಯುಳ್ಳ, ಕಂಕಣವನ್ನು ಕೊಡುವ ಯಜಮಾನನು ಬೇಕಾಗಿರುವನು.

**ಈಶ್ವರ**:--ಅದರಲ್ಲಿ ಏನಿರುವದು! ಪೃಥ್ವಿಗೆ ಸರಿಯಾದ ಬೆಲೆಯುಳ್ಳ ಕಂಕಣವನ್ನು ನಾನು ಬೇಡಿದಷ್ಟು ಕೊಡುವೆನು.

**ಬ್ರಹ್ಮ**:--ಇದೇ ಅಲ್ಲವೇ ನೀನು ಕೊಡುವದು? ಕೈಕಾಲಿಗೆ ಸುತ್ತಿಕೊಂಡಿರುವ ಈ ಹರಕ ಬಟ್ಟೆಯನ್ನು. ಅದು ಪೃಥ್ವಿಯು ಅಂದರೆ ಮಣ್ಣಿನ ಬೆಲೆಗೆ ಸರಿಯಾದದ್ದೇನೊ ನಿಜ.

**ನಾರದ:**—ಪೃಥ್ವಿಯ ಬೆಲೆಯು ಹೇಗೆ ಅದರ ಗರ್ಭದಲ್ಲಿಯ ದ್ರವ್ಯದಲ್ಲಿರುವದೋ, ಅದರಂತೆ ಅದಕ್ಕೆ ಸರಿಯಾದ ಬೆಲೆಯುಳ್ಳ ಕಂಕಣವು ಈ ಕಂಕಣದ ಗರ್ಭದಲ್ಲಿರುವದು. ಆದರೆ ಆ ಬೆಲೆಗೆ ಸರಿಯಾದ ಪದಾರ್ಥವು ಎಲ್ಲಿ ಅದೆ? ಅದನ್ನು ತೋರಿಸುವಿರೋ ಇಲ್ಲವೋ?

**ವಿಶ್ವ:**—ಏನೇ ಮಹಾನಂದೆ! ಇವರು ಪೃಥ್ವಿಗೆ ಸರಿಯಾದ ಬೆಲೆಯುಳ್ಳ ಕಂಕಣವನ್ನು ಕೊಡತಕ್ಕವರು. ಇವರೇ ಪತಿಯೆಂದು ತಿಳಿದು ಇವರ ಕೂಡಾ ಪಾತಿವೃತ್ಯಧರ್ಮದಿಂದ ನಡೆಯುವಿಯಾ?

**ಮಹಾ:**—ಇವರು ಕಂಕಣವನ್ನು ಕೊಟ್ಟರೆ, ಇವರೇ ಪತಿಯೆಂದು ತಿಳಿಯುವೆನು; ಮತ್ತೂ ಪಾತಿವೃತ್ಯಧರ್ಮದಿಂದ ನಡೆಯುವೆನು.

**ವಿಶ್ವ:**—ಏನು ಮಾಡಲಿ! ದೇವರು ಇನ್ನೂ ಕಣ್ಣು ತೆಗೆಯಲೊಲ್ಲನು. ಯಾವನಾದರೂ ಹೀಗೆ ಅಷ್ಟಾವಕ್ರನು ಬಂದು, ನಿನ್ನ ಮುಂದೆ ನಿಂತುಕೊಳ್ಳಬೇಕು. ಆ ಮೇಲೆ ನೋಡುತ್ತೇನೆ, ನಿನ್ನ ಪಾತಿವೃತ್ಯವನ್ನು.

**ಬ್ರಹ್ಮ:**—ಎಲೈ ವೃದ್ಧಮನುಷ್ಯನೇ! ನಿನಗೆ ಬೇಕಾದಂಥ ವೇಶ್ಯಾಂಗನೆ ಇವಳೇ. ನಿಮ್ಮ ಪರಸ್ಪರ ವ್ಯವಹಾರವನ್ನು ನೀವೇ ಗೊತ್ತು ಪಡಿಸಿಕೊಳ್ಳಿರಿ, ಮತ್ತೂ ಪೃಥ್ವಿಗೆ ಸರಿಯಾದ ಬೆಲೆಯ ಕಂಕಣವು ಎಲ್ಲಿರುವದೋ ಅದನ್ನು ತೆಗೆಯಿರಿ; ಅಂದರೆ ನಾವು ನಿಮ್ಮ ಲಗ್ನದ ಸಿದ್ಧತೆಯನ್ನು ಮಾಡುತ್ತೇವೆ.

**ಈಶ್ವರ:**—ಹೌದೇನೆ ವಾರಾಂಗನೇ! ನೀನು ನನ್ನ ಕೂಡಾ ಪಾತಿವೃತ್ಯದಿಂದ ನಡೆಯುವದಕ್ಕೆ ಸಮ್ಮತಿಸುವಿಯಾ? ನೋಡು ನಾನು ಹೀಗೆ ವೃದ್ಧನೂ, ಕುರೂಪಿಯೂ, ರೋಗಿಷ್ಠನೂ, ಮತ್ತೂ ದರಿದ್ರನಿದ್ದು, ಬಹಳೇ ಸಿಟ್ಟಿನವನು. ಆದ್ದರಿಂದ ಚನ್ನಾಗಿ ವಿಚಾರ ಮಾಡು.

**ಮಹಾ:**—ತಾವು ಪೃಥ್ವಿಗೆ ಸರಿಯಾದ ಬೆಲೆಯುಳ್ಳ ಕಂಕಣವನ್ನು ಕೊಟ್ಟರೆ, ತಾವು ವೃದ್ಧರೇ ಇರಲಿ, ಕುರೂಪಿಗಳೇ ಇರಲಿ, ರೋಗಿಷ್ಠರೇ ಇರಲಿ, ನಾನು ಪ್ರೇಮದಿಂದ ತಮ್ಮ ಕೂಡ ಲಗ್ನ ಮಾಡಿಕೊಂಡು,

ಶುದ್ಧಾಂತಃಕರುಣದಿಂದ, ತಾವು ಹೇಳಿದಂತೆ ಮೂರು ದಿನಗಳೇಕೆ, ಮೂರು ಜನ್ಮಗಳವರೆಗೆ ನಡೆಯುವದಕ್ಕೆ ಸಿದ್ಧಳೇ ಇದ್ದೇನೆ.

**ಈಶ್ವರ**:—ನಿನ್ನ ಮಾತಿನ ಮೇಳೆ ನಾನು ಹೇಗೆ ವಿಶ್ವಾಸ ಕೊಡಬೇಕು ?

**ಮಹಾ**:—ಏಕೆ ನನ್ನ ಮಾತುಗಳ ಮೇಲೆ ನೀವು ವಿಶ್ವಾಸವಿಡದಿದ್ದರೆ, ನನ್ನ ಕೈಯಿಂದ ಅಂಥಾದ್ದೇನು ಸಂಘಟಿಸಿರುವದು ?

**ಈಶ್ವರ**:—ಅಲ್ಲೇ ನೀನು ವಾರಾಂಗನೆಯು.

**ಮಹಾ**:—ಮಹಾರಾಜ ! ನಾನು ಶರೀರದಿಂದ ವಾರಾಂಗನೆಯಾದರೂ ಮನಸ್ಸಿನಿಂದಿರುವದಿಲ್ಲ. ಕುಲಿನಸ್ತ್ರೀಯರೂ ವೇಶ್ಯಾಸ್ತ್ರೀಯರೂ, ನೋಡುವದಕ್ಕೆ ಶರೀರದಿಂದ ಒಂದೇ ವಿಧವಾಗಿ ತೋರುತ್ತಾರೆ. ಆದರೆ ಅಂತಕಃಕರಣವು ಮಾತ್ರ ಬೇರೆ. ಶರೀರದೊಳಗೆ ಭೇದವಿರುವದಿಲ್ಲ. ಶರೀರದಿಂದ ಕುಲಾಂಗನೆ ಇದ್ದು ಅಂತಃಕರಣವು ನೀಚವಾಗಿದ್ದರೆ ಅವಳೆಂಥ ಕುಲಾಂಗನೆಯು ? ಅವಳು ವಾರಾಂಗನೆಗಿಂತಲೂ ನೀಚಳೇ ಎಂದು ತಿಳಿಯಬೇಕು. ಮತ್ತು ಶರೀರದಿಂದ ವಾರಾಂಗನೆ ಇದ್ದು ಅಂತಃಕರಣವು ಶುದ್ಧವಾಗಿದ್ದರೆ, ಅವಳಿಗೆ ಕುಲಾಂಗನೆ ಎಂದೆನ್ನುವದಕ್ಕೆ ಬಾಧಕವೇನು ?

**ನಾರದ**:—ಅಹಹಾ ! ಮಹಾತ್ಮರ ಹೊರತು ಇಂತಹ ದಿವ್ಯ ಅಂತಃಕರಣವು ಮತ್ತೆಲ್ಲಿ ದೊರೆಯುವದು ? ಮತ್ತೂ ಇಂತಹ ಅಂತಃಕರಣವಿಲ್ಲದೆ ಮಹತ್ತರವಾದ ಇಚ್ಛಾಶಕ್ತಿಯು ಹೇಗೆ ಉತ್ಪನ್ನವಾದೀತು ? ಎಲೈ ಮೃತ್ಯುಲೋಕದ ಕುಲಾಂಗನೆಯರೇ ! ಆದಿಮಾಯೆಯು ಪೋಣಿಸಿದಂಥ ಶಬ್ದಗಳ ಮುತ್ತಿನ ಹಾರವನ್ನು ನಿಮ್ಮ ಕೊರಳಲ್ಲಿ ಧರಿಸಿರಿ. ಮತ್ತೂ ಎಲೈ ವಾರಾಂಗನೆಯರೇ ! ಅದನ್ನು ಸಂಪಾದಿಸುವದಕ್ಕೆ ನೀವು ಕೂಡಾ ಪ್ರಯತ್ನ ಮಾಡಿರಿ.

**ಈಶ್ವರ**:—ಎಲೇ ವಾರಾಂಗನೇ ! ನೀನು ಬಹಳ ಮಾತಾಡುತ್ತೀ. ಆದರೆ ಇದೊಂದು ಮಾತು ಲಕ್ಷದಲ್ಲಿಡು. ವೇಶ್ಯಯರ ಭವ್ಯಪ್ರಸಾದಕ್ಕೂ, ಶೃಂಗರಿಸಿದ ರಮ್ಯವಾದ ಮಂದಿರಕ್ಕೂ, . ಚಂದನದ ಸುವಾಸಿಕದ

ಮಂಚಕ್ಕೂ, ಮತ್ತೂ ಅಮೌಲ್ಯವಾದ ವಸ್ತ್ರಾಲಂಕಾರಕ್ಕೂ, ಅಲ್ಲದೇ ಗೌರವರ್ಣದ ಬಾಹ್ಯಸ್ವರೂಪಕ್ಕೂ ಮೋಹಿಸಿ, ತನ್ನ ಸಂಪತ್ತಿಯನ್ನು ನಾಶ ಮಾಡಿಕೊಳ್ಳುವಂಥ ಯಜಮಾನನು ನಾನಲ್ಲಾ ತಿಳಿಯಿತೋ?

**ಮಹಾ:**—ನಾನಾದರೂ ಪೂರ್ವಾರ್ಜಿತ ಸಂಪತ್ತಿಯ ಮೇಲೆ ಸುಖ ಪಟ್ಟು ತಮ್ಮ ಗೃಹಿಣಿಯ ಸಂಸಾರವನ್ನು ಮಣ್ಣುಪಾಲು ಮಾಡಿ, ಯೌವ್ವನ ದಿಂದ ಮದಾಂಧರಾಗಿ, ನಮ್ಮ ಮನೆಗೆ ಬರುವಂಥ, ಕಳ್ಳವಿಟ ಪುರುಷರಿಗೆ ನನ್ನ ಪಾತಿವೃತ್ಯದ ಭಾಂಡಾರವನ್ನು ಕೊಳ್ಳೆ ಹೊಡೆಯುವದಕ್ಕೆ ಅವಕಾಶ ಕೊಟ್ಟು ಇಹಪರಗಳ ಆಸೆಯನ್ನು ಬಿಡುವಂಥ ವೇಶ್ಯೆಯು ನಾನಲ್ಲ?

**ಈಶ್ವರ:**—ಹೀಗೇನು? ಹಾಗಾದರೆ ತ್ರಿಕಾಲದಲ್ಲಿಯೂ ನನ್ನ ಸೇವೆಯನ್ನು ಮಾಡಿ, ನನ್ನನ್ನು ಆನಂದಸಾಗರದಲ್ಲಿ ಮುಳುಗಿಸುವಂಥ ವೇಶ್ಯಾಂಗನೆಯು ಬೇಕಾಗಿರುವಳು.

**ಮಹಾ:**—ಮತ್ತೂ ತ್ರಿಕಾಲದಲ್ಲಿಯೂ ನನ್ನಿಂದ ಸೇವೆಯನ್ನು ಮಾಡಿಸಿಕೊಂಡು, ವೇಶ್ಯೆಯಾದಂಥ ನನ್ನನ್ನು ಗ್ರಹಿಣಿಪದಕ್ಕೆ ಮುಟ್ಟಿಸು ವಂಥ ಧನಿಯರೇಬೇಕು.

**ಈಶ್ವರ:**—ಅಂಥ ಧನಿಯು ನಾನೇ; ಆದರೆ ಮುಂದೆ ನಿನಗೆ ನನ್ನ ವಿಷಯದಲ್ಲಿ ಬೇಸರವಾಗಿ ನನ್ನ ಕಂಕಣವನ್ನು ಅಪಹಾರ ಮಾಡಿ ವಚನ ಭ್ರಷ್ಟಳಾದರೆ?

**ಮಹಾ:**—ನಾನು ವಚನಭ್ರಷ್ಟಳಾದರೆ, ಬ್ರಹ್ಮತ್ಯ, ಗೋಹತ್ಯ, ಮಾತೃಹತ್ಯ ಮುಂತಾದ ಸರ್ವಹತ್ಯಗಳ ಪಾತಕವು ನನಗೆ ಬರಲಿ; ಮತ್ತೂ ಆದರ ಕ್ಷಾಲನಾರ್ಥವಾಗಿ ಯಮಧರ್ಮನು ನನ್ನನ್ನು ಕಂಟಕವನದೊಳ ಗಿಂದ ಎಳೆದಾಡುತ್ತಾ ತೆಗೆದುಕೊಂಡು ಹೋಗಲಿ. ತಪ್ತವಾದ ತೈಲದ ಕಡಾಯದಲ್ಲಿ ಹಾಕಲಿ. ಮತ್ತೂ ತಪ್ತಲೋಹಸ್ತಂಬಕ್ಕೆ ಬಂಧಿಸಿ ಬರೆ ಹಾಕಲಿ; ವಿಶೇಷವೇನು ಹೇಳಲಿ ಈ ತ್ರೀಲೋಕದಲ್ಲಿ ಮಹಾ ಪಾಪ ಮಾಡಿ ದವರಿಗೆ ಎಂಥ ಶಾಸನವಾಗುವದೋ ಅಂಥ ಶಾಸನವು ನನಗಾಗಲಿ.

**ಈಶ್ವರ:**—ಒಳ್ಳೇದು ಪೃಥ್ವಿಗೆ ಸರಿಯಾದ ಕಂಕಣವನ್ನು ತಕ್ಕೋ.

ಅದರ ಬೆಲೆಯನ್ನು ಮಾಡಿಸಿ ನಿನ್ನ ಕೈಯಲ್ಲಿ ಧರಿಸು; ಮತ್ತು ನನ್ನನ್ನು ಮದುವೆಯಾಗು.

**ವಿಶ್ವ**:—ಎಲ್ಲಿ ನೋಡೋಣ! ಬ್ರಹ್ಮಾನಂದನೇ ಸರಾಫಕಟ್ಟಿಗೆ ಹೋಗಿ, ಇದರ ಬೆಲೆಯನ್ನು ಮಾಡಿಸಿಕೊಂಡು ಬಾ. ಎಲಾ ನಾನು ಸಹಜ ಮಾತನಾಡಿದರೆ ಅದು ನಿಜವೇ ಆಯಿತಲ್ಲಾ. ಮಹಾನಂದೇ ನೀನು ಪಂಥ ಮಾಡಿದಂತೆ, ಪೃಥ್ವಿಗೆ ಸರಿಯಾದ ಬೆಲೆಯುಳ್ಳ ಕಂಕಣವನ್ನು ಕೊಡುವ ಯಜಮಾನನು ದೊರೆತನು. ಇನ್ನು ಮೇಲೆ ನೀನು ನಿನ್ನ ಪಾತಿವೃತ್ಯವನ್ನು ತೋರಿಸಲು ಸಿದ್ಧಳಾಗುವಿಯಾ?

**ಮಹಾ**:—ಅದಕ್ಕೆ ಶಂಶಯವೇಕೆ. ಒಂದುಸಾರೆ ಏಕೆ? ಹತ್ತುಸಾರೆ ತೋರಿಸುತ್ತೇನೆ.

**ವಿಶ್ವ**:—ನೋಡು ಚನ್ನಾಗಿ ವಿಚಾರ ಮಾಡು.

**ಮಹಾ**:—ನಾನು ಪೂರ್ಣವಿಚಾರ ಮಾಡಿದ್ದೇನೆ.

**ವಿಶ್ವ**:—ಇಲ್ಲದಿದ್ದರೆ ಲಗ್ನಕ್ಕೆ ಮಾಡಿದ ಸಾಹಿತ್ಯವು ವ್ಯರ್ಥವಾದೀತು.

**ಮಹಾ**:—ಏನೂ ವ್ಯರ್ಥವಾಗುವದಿಲ್ಲಾ.

**ವಿಶ್ವ**:—ನಿನಗೆ ಹುಚ್ಚು ಬೇರೆ ಹಿಡಿದಿಲ್ಲವೇ? ಇಂತಹ ಮುದಿಹದ್ದಿನ ಕೂಡ ಲಗ್ನ ಮಾಡಿಕೊಂಡು ಮಾಡುವದಾದರೂ ಏನು?

**ಮಹಾ**:—ಏನುಮಾಡುತ್ತೇನೆಂಬದನ್ನು ಪ್ರತ್ಯಕ್ಷ ಕೃತಿಯಿಂದಲೇ ಮಾಡಿ ತೋರಿಸುತ್ತೇನೆ.

**ವಿಶ್ವ**:—ಅಂದ ಮೇಲೆ, ನಿನ್ನ ನಿಶ್ಚಯವು ಖಂಡಿತವೇ?

**ಮಹಾ**:—ನಿಜವಾಗಿಯೂ ಖಂಡಿತವು.

**ನಾರದ**:—ಏನಮ್ಮಾ! ಕಂಕಣವನ್ನು ಉಡಿಯಲ್ಲಿ ಹಾಕಿದ ಕೂಡಲೇ, ನಿಮ್ಮ ಹುಡುಗಿಯು ನಮ್ಮ ಧನಿಯರ ಸ್ವಾಧೀನಳಾದಳು; ಅವಳಿಗೆ ಮತ್ತೇನು ಥಾಪಕೊಡಬೇಕೆಂದು ಯೋಚಿಸುತ್ತೀರಿ? ನಡಿಯಿರಿ ಬೇಗನೆ ಲಗ್ನದ ಸಿದ್ಧತೆಯನ್ನು ಮಾಡಿರಿ.

**ಬ್ರಹ್ಮ:**—ಅವ್ವಾ! ಇದು ಪೃಥ್ವಿಗೆ ಸರಿಯಾದ ಬೆಲೆಯು ಕಂಕಣ ವಿರುವದು.

**ವಿಶ್ವ:**—ಸದಾನಂದೆ, ಬ್ರಹ್ಮಾನಂದಾ! ನೀವಾದರೂ ಅವಳಿಗೇನಾದರೂ ಬುದ್ಧಿ ಹೇಳಿರಿ.

**ಸದಾ:**—ಅವ್ವಾ ನೀನು ಹೀಗೇಕೆ ಮಾಡುತ್ತೀ? ಲಗ್ನಮಾಡಿ ಕೊಳ್ಳುವದು ಸುಖಕ್ಕೋಸ್ಕರವಲ್ಲವೇ?

**ಮಹಾ:**—ಹೌದು. ಹೀಗೆ ಸರ್ವರ ಅಪೇಕ್ಷೆ ಇರುವದೇನೋ ನಿಜ? ಆದರೆ ಪರಮೇಶ್ವರನು ಎಲ್ಲರಿಗೂ ಒಂದೇಸವನೆ ಸುಖವನ್ನು ಕೊಡುವನೇನು.

**ಬ್ರಹ್ಮ:**—ತಮಗೆ ತಿಳಿದೂ ತಿಳಿದೂ ಬೆಂಕಿಯಲ್ಲಿ ಹಾರಿಕೊಂಡರೆ ಅದಕ್ಕೆ ಪರಮೇಶ್ವರನು ಮಾಡುವದೇನು?

**ಸದಾ:**—ಅದಕ್ಕೋಸ್ಕರ ನಾನು ಹೇಳುವದೇನಂದರೆ; ಆ ಕಂಕಣದ ಅಪೇಕ್ಷೆಯಿಂದ, ಬಂಗಾರದಂತಿರುವ ಈ ನಿನ್ನ ಶರೀರವನ್ನು, ಇಂತಹ ರೋಗಿಷ್ಠ ಮನುಷ್ಯನಿಗೆ ಮಾರಿಕೊಳ್ಳಬೇಡಾ; ಬೇಕಾದರೆ ಅವನ ಕಂಕಣವನ್ನು ಅವನಿಗೆ ತಿರುಗಿ ಕೊಟ್ಟುಬಿಡು.

**ಮಹಾ:**—ನಾನು ಕೊಟ್ಟೇನು! ಆದರೆ ಅವರು ತಿರುಗಿ ತೆಗೆದು ಕೊಳ್ಳುವರೇನು?

**ಈಶ್ವರ:**—ನಾನು ತೆಗೆದುಕೊಳ್ಳುತ್ತೇನೆ ಕೊಡು; ಆದರಂತೆ ನೀನು ನಿನ್ನ ಶಬ್ದಗಳನ್ನು ತೆಗೆದುಕೋ ಅಂದರಾಯಿತು.

**ಮಹಾ:**—ನಾನು ಅದನ್ನು ಸುಲಭವಾಗಿ ತೆಗೆದುಕೊಳ್ಳುತ್ತೇನೆ? ನನ್ನ ಪ್ರತಿಯೊಂದು ಶಬ್ದದ ಬೆಲೆಯು, ನಿಮ್ಮ ಈ ಕಂಕಣಕಿಂತಲೂ ಸಹಸ್ರ ಪಾಲು ಹೆಚ್ಚಾಗಿರುವದು.

**ಈಶ್ವರ:**—ಅಂದ ಮೇಲೆ ಆ ನಿನ್ನ ಸರ್ವಶಬ್ದಗಳ ಬೆಲೆಯು ಎಷ್ಟಾಗುವದು ಅದನ್ನು ಹೇಳು. ನಾನದನ್ನು ಕೊಡುವದಕ್ಕೆ ಸಿದ್ಧನಾಗಿರುವೆನು.

**ಮುಹಾ:**—ಹಾಗಾದರೆ ನನ್ನನ್ನು ನಿಮ್ಮ ಧರ್ಮಪತ್ನಿಯನ್ನಾಗಿ ಮಾಡಿಕೊಳ್ಳಿರಿ; ಅಂದರೆ ನನ್ನ ಸರ್ವ ಶಬ್ದಗಳ ಬೆಲೆಯನ್ನು ಕೊಟ್ಟಂತಾಗುವದು.

**ವಿಶ್ವ:**—ಎಲೇ ಹುಚ್ಚ ಹುಡುಗಿಯೇ, ತಿಳಿದು ತಿಳಿದು ನಿನ್ನ ಸೌಂದರ್ಯಕ್ಕೆ ಅಗ್ನಿಸಂಸ್ಕಾರವನ್ನೇಕೆ ಮಾಡಿಕೊಳ್ಳುತ್ತೀ ?

**ಮುಹಾ:**—ಛೇ ! ಛೇ ! ಇದು ಅಗ್ನಿಯಲ್ಲಾ. ಸರ್ವ ಜಗವನ್ನೇ ಆಹುತಿ ತಕ್ಕೊಳ್ಳಬೇಕೆಂದು, ನೀನು ನಡಿಸಿರುವ ಕಾಮಯಜ್ಞದ ಮೇಲೆ, ಪಾತಿವೃತ್ಯವೆಂಬ ಜಲದ ಮಳೆ ಸುರಿಸುತ್ತೇನೆ.

**ವಿಶ್ವ:**—ಹುಚ್ಚಿ ಇದು ಜಲವಲ್ಲಾ, ಹಾಲಾಹಲವಿರುವದು; ಇದು ಬರೇ ನಿನ್ನನ್ನೇ ಅಲ್ಲಾ, ನಮ್ಮೆಲ್ಲರನ್ನೂ ಸಹ ಗತಪ್ರಾಣಮಾಡಿಬಿಟ್ಟೀತು.

**ಮುಹಾ:**—ಅಮ್ಮಾ ಇದು ಹಾಲಾಹಲವಲ್ಲಾ; ಅಮೃತವಿರುವದು. ಅದು ನನ್ನ ನಿಮ್ಮಂತೆ ಕಾಮಾಗ್ನಿಯಿಂದ ದಗ್ಧರಾದ, ವೇಶ್ಯಾಭಗಿನಿಯರನ್ನು ಪುನರುಜ್ಜೀವನಗೊಳಿಸುವದು.

**ವಿಶ್ವ:**—ಸದಾನಂದೆ, ಬ್ರಹ್ಮಾನಂದಾ ! ನಡೆಯಿರಪ್ಪಾ ನಡೆಯಿರಿ. ಬೇಗನೇ ಲಗ್ನದ ಸಿದ್ಧತೆಯನ್ನು ಮಾಡೋಣ. ಲಗ್ನವೆಂಥಾದ್ದು, ಪ್ರೇತಸಂಸ್ಕಾರವೇ; ನನ್ನ ಮಗಳ ದೈವವು ಒಡೆದು ಹೋಯಿತು.

**ನಾರದ:**—ಧನಿಯರೇ ನಡೆಯಿರಿ. ಇನ್ನು ಮೇಲೆ ನಿಮಗೆ ಮದುಮಗನಂತೆ ವಸ್ತ್ರಾಲಂಕಾರ ಮಾಡುತ್ತೇನೆ. ನಿಮಗೆ ಹೆಂಡತಿಯು ದೊರೆತಳು, ನಮಗೆ ನಮ್ಮ ಅಮ್ಮನು ದೊರೆತಳು.

**ಮುಹಾ:**—ಸಖಿಯೇ ! ನಿನ್ನ ಆಶ್ವಾಸನದ ಪರಿಣಾಮವು ಹೀಗಾಗಬೇಕೆ ?

**ತುಂಬುರ:**—ಗೆಳತಿ ! ಯಾವದು ಪ್ರಾರಂಭದಲ್ಲಿ ಕಷ್ಟವಾಗುವದೋ ಅದು ಕೊನೆಗೆ ಸುಖವಾಗಿಯೇ ಪರಿಣಮಿಸುವದು. ಈಗ ನಿನ್ನ ಪರೀಕ್ಷೆಯ ಕಾಲವೇ ಬಂದಿರುವದು. ಈಗ ನಿನ್ನ ಕಡುತರವಾದ ಪಾತಿವೃತ್ಯದ ಪ್ರಭಾವವನ್ನು, ಈ ಮೃತ್ಯುಲೋಕದ ಕನ್ಯೆಯರಿಗೆ ತೋರಿಸು; ಮತ್ತು ಯಾವ

ನನ್ನು ನೀನು ಚರ್ಮಚಕ್ಷುಗಳಿಂದ, ಮಹಾ ವ್ಯಾಧಿಗ್ರಹಸ್ಥನೂ, ನಿರ್ಬಲನೂ, ಆದ ಮಾನವಪ್ರಾಣಿಯ ರೂಪದಿಂದ ನೋಡುವಿಯೋ, ಅವನನ್ನು ಅಂತಃಚಕ್ಷುಗಳಿಂದ, ನಿನ್ನ ಆರಾಧ್ಯದೇವತೆಯ ರೂಪದಿಂದ ನೋಡು; ಅಂದರೆ ಅದರೊಳಗಿನ ಸತ್ಯಜ್ಞಾನವು ತಿಳಿಯುವದು.

**ಮಹಾ:**—ಒಳ್ಳೇದು! ಹಾಗಾದರೆ ನಿನ್ನ ಅಭಿಪ್ರಾಯದಂತೆ ನಾನು ಹಾಗೇ ತಿಳಿಯುತ್ತೇನೆ.

ರಾಗ ಖಮಾಚ್, ತಾಳ ತ್ರಿವಟ.

**ಇವನೇ ಗಿರಿಜಾರಮಣನೇ। ಇವನೇ ಫಾಲಾಕ್ಷಶಿವನೇ। ಇವನೇ ಪಿತೃವನನಿವಾಸಾ। ಜೀವಾತ್ಮಾ ಪರಮಾತ್ಮನೇ ॥ ೧ ॥**

## ಪ್ರವೇಶ ೩.

---

### ಅಂತಃಪುರ

**ಈಶ್ವರ:**—ಏನೇ ಮಹಾನಂದೆ!

**ಮಹಾ:**—ಪ್ರಾಣನಾಥರೇ! ಏನು? ಆಜ್ಞಾಪಿಸಬೇಕು.

**ಈಶ್ವರ:**—ನಿನ್ನ ಪ್ರಾಣನಾಥನು ಸ್ಮಶಾನಕ್ಕೆ ಹೋದನು!

**ತುಂಬುರ:**—ನಾರದ ಸ್ವಾಮಿಗಳೇ! ಹೀಗೆ ಸುಂದರವಾಗಿ ಶ್ರಿಂಗ್ರಿಸಿದ ಮಂದಿರದಲ್ಲಿ ಚಂದನದ ಸುವಾಸನೆಯಿಂದ ಯುಕ್ತವಾದ ಮಂಚದ ಮೇಲೆ ಕುಳಿತಿರುವಾಗಲೂ, ಮಹಾದೇವರಿಗೆ ಸ್ಮಶಾನದ ಸ್ಮರಣೆಯು ಆಗುತ್ತಲೇ ಇರುವದು.

**ನಾರದ:**—ಸ್ವಾಮೀ! ಅವರಿಗೆ ಯಾವಾಗಲೂ ಸ್ಮಶಾನದಲ್ಲಿದ್ದು ಅಭ್ಯಾಸ. ಈ ಸುಂದರವಾದ ಮಂದಿರದಲ್ಲಿ ತಪ್ಪಿಸಿಕೊಂಡಂತೆ ಆಗುವದು ಸ್ವಾಭಾವಿಕವೇ.

**ಈಶ್ವರ:**—ಎಲ್ಯೆ ಚಾಂಡಾಲಿಯೇ! ನೀನು ನನ್ನನ್ನು ಈ ಗಾದಿಯ

ಮೇಲೆ ಕುಳ್ಳಿರಿಸಿರುವಿ; ಆದರೆ ನನಗೆ ಕೆಳಗೆ ದಬ್ಬಿದಂತೆ ಆಗುವದು. ನನ್ನನ್ನು ಮುಸಕೇಕಟ್ಟಿ ಕೊಲ್ಲಬೇಕೆಂದು ವಿಚಾರಮಾಡಿರುವಿಯೋ ಏನೆ ? ನೀನಂತೂ ವೇಶ್ಯೆಯು; ನಡೆ ತೆಗೆದುಕೊಂಡು ಬಾ, ನನ್ನ ವ್ಯಾಘ್ರಾಂಬ್ರವನ್ನು; ತೆಳಗೆ ಹಾಸು, ಮತ್ತೂ ಅದರ ಮೇಲೆ ನನ್ನನ್ನು ಕೂಡ್ರಿಸು.

**ಮಹಾ**:—ಪ್ರಾಣನಾಥ! ಆ ವ್ಯಾಘ್ರಾಂಬರದ ಕೂದಲಗಳು, ತಮ್ಮ ದೇಹಕ್ಕೆ ಬಾಧೆ ಕೊಟ್ಟಾವು!

**ಈಶ್ವರ**:—ಏನೂ ಇಲ್ಲಾ. ಆ ಬಾಧೆಯನ್ನು ಸಹಿಸಬಹುದು. ಆದರೆ ನಿನ್ನ ಬಾಧೆಯನ್ನು ಸಹಿಸಲಾರೆನು. ಮೊದಲು ಹಾಸು, ಮುಖದಿಂದ ಹೇಳದ ವಿನಹಾ, ನೀನು ಒಂದೂ ಕೆಲಸ ಮಾಡುವದಿಲ್ಲಾ; ಅಂತೇ ಮಹಾಪತಿ ವ್ರತೆಯು–ಹೂ. ಹಾಸು ನನ್ನನ್ನು ಅದರ ಮೇಲೆ ಕೂಡ್ರಿಸು. ಎಂಥಾ ಮರಟ ಮನುಷ್ಯಳೇ ನೀನು. ಎಚ್ಚರಿಕೆಯಿಂದಾ ನನ್ನ ದಂಡವನ್ನು ಹಿಡಿ. ನಿನ್ನ ಕಬ್ಬಿಣದಂತೆ ಬಿರಸಾದ ಕೈಗಳನ್ನು, ನನ್ನ ಹುಣ್ಣಿಗೆ ತಟ್ಟಿಸಬೇಡಾ, ರಕ್ತ ಬಂದೀತು.

**ಮಹಾ**:—ಇಲ್ಲ ಪ್ರಾಣನಾಥ, ತಮಗೆ ಸ್ವಲ್ಪಾದರೂ ಬಾಧೆಯಾಗ ದಂತೆ ಹಿಡಿಯುವೆನು (ಅವನನ್ನು ಕೂಡ್ರಿಸುತ್ತಾಳೆ.)

**ಈಶ್ವರ**:—ಹರೇರಾಮ; ಮಹಾನಂದೆ ನಿನಗೆ ಕಲ್ಯಾಣವಾಗಲಿ.

**ಮಹಾ**:—ಶ್ರೀಸಾಂಬ ಸದಾಶಿವಾರ್ಪಣಮಸ್ತು!

**ತುಂಬುರ**:—ಏನು ನಾರದಸ್ವಾಮಿಗಳೇ! ಮಹದೇವರು, ಮಾತೋಶ್ರೀಗೆ ಕೊಟ್ಟ ಆಶೀರ್ವಾದವು, ತಮ್ಮದು, ತಮ್ಮ ಕೈಗಳಲ್ಲಿಯೇ ಬಿತ್ತು.

**ನಾರದ**:—ಮಾತೋಶ್ರೀಯು, ಒಳ್ಳೇ ಯುಕ್ತಿಯನ್ನು ತೆಗೆದಳು. ಇನ್ನು ಮೇಲೆ ಏನಾದರೂ ಬೈದರೆ, ಇದರಂತೇ ಅವೇ ಶಬ್ದಗಳು ತಿರುಗಿ ಬಂದಾವು.

**ಈಶ್ವರ**:—ಏನೇ ಮಹಾನಂದೆ! ನಾನು ನಿನಗೆ ಕೊಟ್ಟ ಆಶೀರ್ವಾದವುಗಳನ್ನು ಸಾಂಬಸದಾಶಿವನಿಗೆ ಅರ್ಪಣ ಮಾಡಿದೆ; ಅಂದರೆ ನಮ್ಮ ಆಶೀರ್ವಾದಕ್ಕೆ ನೀನು ಮಹತ್ವವನ್ನೇ ಕೊಡುವದಿಲ್ಲವೇನು?

**ಮಹಾ**:—ಮಹಾರಾಜ ಹಾಗಲ್ಲ; ನನ್ನ ಸರ್ವ ದೇವಧರ್ಮದ, ಸುಖದುಃಖದ, ಪಾಪಪುಣ್ಯದ, ಅಧಿಕಾರಿಗಳು ತಾವೇ ಇರುವದರಿಂದ, ನನಗೆ ದೊರೆತ ಆಶೀರ್ವಾದವು, ತಮಗೆ ಫಲದ್ರೂಪವಾಗಲೆಂದು ತಿಳಿದು, ಸಾಂಬಸದಾಶಿವ ಅಂದರೆ ತಮಗೆ ಅರ್ಪಿಸಿದೆನು.

**ಈಶ್ವರ**:—ಅಯ್ಯೋ ಅಮ್ಮಾ ಹರೇರಾಮ.

**ಮಹಾ**:—ಮಹಾರಾಜರಿಗೆ ಈಗ ಏನು ವ್ಯಥೆಯಾಗುವದು?

**ಈಶ್ವರ**:—ಏನೇ ನನ್ನ ಸೊಂಟವು ನೋಯುತ್ತಿರುವದು.

**ಮಹಾ**:—ಹಾಗಾದರೆ ಸ್ವಲ್ಪ ಒತ್ತಲೇ, ಅಥವಾ ಬೆಂಕಿಯಿಂದಾ ಕಾವು ಕೊಡಲೇ?

**ಈಶ್ವರ**:—ಸ್ವಲ್ಪ ಮೆಲ್ಲನೆ ಒತ್ತುತ್ತ ಕೂಡ್ರು. (ಅವಳು ಒತ್ತುತ್ತಾಳೆ) ಹರೇರಾಮ.

**ಮಹಾ**:—ಪ್ರಾಣನಾಥ ಈಗ ತಮಗೆ ಏನಾಗುವದು?

**ಈಶ್ವರ**:ನ—ನ್ನ ತಲೆ ನೋವು ಹೆಚ್ಚಾಗಿರುವದು.

**ಮಹಾ**:—ಸ್ವಲ್ಪ ಶುಂಠಿಯನ್ನು ತೇದು ಹಚ್ಚಲ್ಯಾ?

**ಈಶ್ವರ**:—ಹೂ ಹಚ್ಚು. (ಅವಳು ಶುಂಠಿಯನ್ನು ತೇಯುತ್ತಾಳೆ) ಅಯ್ಯೋ! ಅಮ್. ಎಲೇ ತಿಳಿಗೇಡಿಯೇ, ಶುಂಠಿಯನ್ನು ಏತಕ್ಕೆ ತೇಯುತ್ತಿ?

**ಮಹಾ**:—ಇದನ್ನು ತಮ್ಮ ಹಣೆಗೆ ಹಚ್ಚುತ್ತೇನೆ.

**ಈಶ್ವರ**:—ಇನ್ನು ನನ್ನ ತಲೆಯ ಮೇಲೆ ಕಲ್ಲುಹಾಕು. ಎಲೇ ಮೂಢಳೇ, ನನ್ನ ಹೊಟ್ಟೆ ನೋವು ಹೆಚ್ಚಾಗಿದೆ. ತಲೆಶೂಲೆ ಇಲ್ಲಾ.

**ಮಹಾ**:—ಹಾಗಾದರೆ ಇದರೊಳಗೆ ಬೆಲ್ಲತುಪ್ಪವನ್ನು ಹಾಕಿ ಕುದಿಸುತ್ತೇನೆ, ಅದನ್ನು ತಕ್ಕೊಂಡರೆ ಹೊಟ್ಟೆಶೂಲೆ ಕಡಿಮೆ ಆಗುವದು.

**ಈಶ್ವರ**:—ಅಂದರೆ? ನೀನು ಅದೇ ಔಷಧವನ್ನು, ಇದರೊಳಗಿಂದ ಅದಕ್ಕೆ, ಅದರೊಳಗಿಂದ ಇದಕ್ಕೆ, ಹಾಕಿ ನನಗೆ ಕುಡಿಸುವಿಯೋ ಏನು? ಮತ್ತು ನನಗೆ ಅದರಿಂದ ಗುಣಬರುವದೋ? ನಿನಗೆ ನನ್ನ ವಿಷಯಕ್ಕೆ

ಬೇಸರವಾಗಿದ್ದರೆ, ನಾನು ಹೀಗೇ ಹೊರಗಿನ ಕಟ್ಟೆಯ ಮೇಲೆ ಮಲಗುತ್ತೇನೆ.

**ಮಹಾ**:—ಮಹರಾಜ, ಹೋಗಬೇಡಿ. ಮೊದಲೇ ತಮ್ಮ ಪ್ರಕೃತಿಯು, ಕ್ಷೀಣವಾಗಿರುವದು. ಅದರಲ್ಲಿ ಹೊರಗೆ ಕಟ್ಟೆಯ ಮೇಲೆ ಮಲಗಿಕೊಂಡರೆ, ಗಾಳಿಬಡಿದು ಮತ್ತಿಷ್ಟು ಹೆಚ್ಚಾದೀತು. ಆದ್ದರಿಂದ ನಾನು ನಿಮ್ಮ ಕಾಲುಬೀಳುತ್ತೇನೆ, ಹೊರಗೆ ಹೋಗಿ ಮಲಗಬೇಡರಿ.

**ಈಶ್ವರ**:—ಹಾಗಾದರೆ, ಆ ಸಾಣೇಕಲ್ಲು, ಶುಂಠಿ, ಮತ್ತೂ ಆ ನೀರಿನ ಪಾತ್ರೆ, ಅವುಗಳನ್ನು ಹೊರಗೆ ಬೀಸಾಕು. ನನ್ನ ತಲೆ ನೋವು ಇಲ್ಲಾ. ಹೊಟ್ಟೆಶೂಲೆಯು ಹೋಯಿತು. ಆದರೆ ಕಾಲುಗಳು ನೋಯುತ್ತವೆ. ಅವುಗಳನ್ನು ಸ್ವಲ್ಪ ಒತ್ತು. ಏನೇ ನೀನು ಪತಿವ್ರತೆಯೆಂದೆನಿಸುತ್ತೀ. ಆದರೆ ನಿನ್ನ ಪತಿಯ ಮುಂದೆ ಮೊಳಕಾಲೂರಿ ಕೂಡ್ರುತ್ತೀಯಾ, ನಿನಗೆ ಏನಾದರೂ ಸ್ವಲ್ಪ ಮರ್ಯಾದೆಯೂ, ದಾಕ್ಷಿಣ್ಯವೂ, ಇರುವದೇ? ಮೇಲಕ್ಕೆದ್ದು ಕಾಲುಗಳನ್ನು ಒತ್ತು. (ಅವಳು ಕಾಲು ಒತ್ತುತ್ತಾಳೆ) ಹರೇ ರಾಮ! ಅಯ್ಯೋ! ಅಮ್ಮಾ! ಸಾಕುಬಿಡೆ, ಎಷ್ಟು ಹೊತ್ತು ಕಾಲುಗಳನ್ನು ಒತ್ತುತ್ತೀ. ನನ್ನ ಸೊಂಟವು ನೋಯುವದೆಂದು, ಆಗಲೇ ಹೇಳಿದ್ದೆನು. ಇಷ್ಟರಲ್ಲಿಯೇ ಮರೆತುಬಿಟ್ಟೆಯಾ; ಅಂದ ಮೇಲೆ ನಾನು ನಿನ್ನ ಪತಿ ಎಂಬದನ್ನು ನೀನು ಬೇಗನೆ ಮರೆತುಬಿಡತಕ್ಕವಳೇ. ಮುಖವನ್ನೇನು ನೋಡುತ್ತೀ; ಸೊಂಟವನ್ನು ಒತ್ತು. ಅಯ್ಯೋ, ಅಮ್ಮಾ. ಏನೇ ನನಗೆ ಬಹಳೇ ಹಸಿವೆಯಾಗಿರುವದು. ಅದಕ್ಕೆ ಮಾರ್ಗವೇನು! ನೀನು ಹೀಗೆ ರಾತ್ರಿಯಲ್ಲಾ ನನ್ನ ಸೊಂಟವನ್ನು ಒತ್ತುತ್ತಾ ಕುಳಿತರೆ, ಅದರಿಂದ ನನ್ನ ಹೊಟ್ಟೆ ತುಂಬುವದೇ?

**ಮಹಾ**:—ತಮಗೆ ಏನಾದರೂ ಫಲಹಾರವನ್ನು ತಂದುಕೊಡಲೇ?

**ಈಶ್ವರ**:—ಹಸಿವೆಯಾದ ಮನುಷ್ಯನಿಗೆ ಯಾರಾದರೂ, ಫಲಹಾರವನ್ನು ತಂದುಕೊಡುವರೇ?

**ಮಹಾ**:—ಹಾಗಲ್ಲಾ, ಫಲಹಾರಕ್ಕೆ ಏನು ತಂದುಕೊಡಬೇಕೆಂದು ಕೇಳಿದೆನು?

**ಈಶ್ವರ:**—ಏಕೆ! ನಿನ್ನ ಮನೆಯೊಳಗೆ ಏನೂ ಇಲ್ಲವೇ? ಏನೇ ಇಂಥಾ ಪೃಥ್ವಿಗೆ ಸರಿಯಾದ ಬೆಲೆಯುಳ್ಳ ಕಂಕಣವನ್ನು ತಂದುಕೊಟ್ಟೆ. ನನಗೆ ಫಲಹಾರವನ್ನು ತಂದುಕೊಡುವದಿಲ್ಲವೇ! ನಿಮ್ಮ ವೇಶ್ಯರ ಕಪಟ ತನಕ್ಕೆ ಪರಿಮಿತಿಯೇ ಇಲ್ಲಾ. ನಡೆಹೋಗು ನನಗೆ ನಿನ್ನದೇನೂ ಬೇಡಾ. ನಾನು ನನ್ನ ಜೋಳಿಗೆಯೊಳಗಿನ ಭಕ್ಕರಿ ಚೂರನ್ನೇ ತಿನ್ನುತ್ತೇನೆ. ಏಕೇ ಅವುಗಳನ್ನು ಸಹ ತಿಂದುಬಿಟ್ಟಿರೇನು? (ನೋಡಿ) ಎಲ್ಲಿರುವವು, ಒಂದು ಚೂರು ಕೂಡಾ ಇಲ್ಲಾ. ನೀವು ಹೆಂಗಸರು, ಯಾರನ್ನಾದರೂ, ಕೊಲ್ಲತಕ್ಕ ವರು (ಜೋಳಿಗಿ ಅಪ್ಪಳಿಸುತ್ತಾನೆ) ಆಯಿತು ಹಸಿವಿಯ ನಿಮಿತ್ಯವನ್ನು ಹೇಳಿದ ಕೂಡಲೇ ಸೊಂಟ ಒತ್ತುವದು ಹಾಗೇ ಉಳಿಯಿತು. ಈಗೇನು ನಿನ್ನನ್ನು ಕೊಲ್ಲಬೇಕೋ? ಅಥವಾ ನನ್ನ ಸೊಂಟವನ್ನು ಒತ್ತುತ್ತಿಯೋ? ಹರೇ ರಾಮ! ಅಯ್ಯೋ! ಅಮ್ಮಾ!

**ತುಂಬುರ:**—ನಾರದ ಸ್ವಾಮಿಗಳೇ ತಾತಮಹಾರಾಜರು ಹೀಗೇಕೆ ನೆರಳುತ್ತಾರೆ?

**ನಾರದ:**—ಅವರ ಸೊಂಟವು ತೀರಾ ನಿತ್ರಾಣವಾಗಿ ಹೋಗಿ ರುವದು.

**ತುಂಬುರ:**—ಅದೇತರದೆಸೆಯಿಂದಾ?

**ನಾರದ:**—ಮಾತೋಶ್ರೀ ಸತ್ವದಭಾರದಿಂದಾ.

**ವಿಶ್ವ:**—ಎಲೈ ಚಾಂಡಾಲರೇ! ನೀವು ಇನ್ನೂ ಎಚ್ಚರದಿಂದಿರು ವಿರಾ?

**ನಾರದ:**—ಹಾಗಾದರೆ ಮತ್ತೇನು ಮಾಡಬೇಕು? ಹೊತ್ತುಕೊಳ್ಳು ವದಿಕ್ಕಿಲ್ಲಾ, ಹಾಸಿಕೊಳ್ಳುವದಕ್ಕಿಲ್ಲಾ.

**ವಿಶ್ವ:**—ಒಳ್ಳೇದು ನನ್ನ ಮಗಳು ಎಚ್ಚರದಿಂದಿರುವಳೇ? ಅಥವಾ ಅವಳಿಗೆ ನಿದ್ರೆಯು ಹ್ಯಾಗೆ ಬರಬೇಕು? ಅತ್ತೂ ಅತ್ತೂ ಬೇಸತ್ತಿರಬಹುದು.

**ನಾರದ:**—ಅವರಿಗೇನಾಗಿರುವದು ಅಳುವದಕ್ಕೆ? ಅವರು ಬೇಕಾದ ಹಾಗೆ ಈಚೆಯಿಂದಾ ಆಚೆಗೆ ತಿರುಗಾಡುತ್ತಿರುವರು; ಆದರೆ ನಮ್ಮ ಧನಿಯರು

ಮಾತ್ರ, ಅಯ್ಯೋ ಅಮ್ಮಾ. ಅಯ್ಯೋ ಅಮ್ಮಾ. ಅನ್ನುತ್ತ ದನದ ಹಾಗೆ ಒದರುತ್ತಿರುವರು.

**ವಿಶ್ವ**:--ಅವರಿಗೆ ದೇವರೇ ಅಳುವದಕ್ಕೆ ಹಚ್ಚಿರುವನು. ಯಾರೇನು ಮಾಡಬೇಕು? ಸುಟ್ಟಮೋರೆಯುವನು ನಮ್ಮನ್ನು ಮಾತ್ರ ಅಳಿಸುವದಕ್ಕೆ ಬಂದಿರುವನು (ಅಳುತ್ತಾಳೆ).

**ನಾರದ**:--ಅಮ್ಮಾ ಅಳಬೇಡಿರಿ; ಹೇಗಾದರೂ ಮಾಡಿ, ಆ ಪೃಥ್ವಿಗೆ ಸರಿಯಾದ ಬೆಲೆಯುಳ್ಳ ಕಂಕಣವನ್ನು ನೋಡಿ ಸಮಾಧಾನ ಮಾಡಿಕೊಳ್ಳಿರಿ.

**ವಿಶ್ವ**:--ಸುಮ್ಮನೆ ಕೂಡು, ಕೆಟ್ಟಮೋರೆಯುವನೇ; ಮಗಳೇ ಮಹಾನಂದೆ! ಏನು ಮಾಡುತ್ತೀ? ನಿಮ್ಮ ಯಜಮಾನರ ಸೊಂಟವನ್ನು ಒತ್ತುತ್ತೀಯಾ? ಅಯ್ಯೋ ದೇವರೇ! ತಾರುಣ್ಯಕ್ಕೆ ಬಂದ ಹೆಣ್ಣುಮಕ್ಕಳು ತಾರುಣ್ಯದ ಸುಖದ ಪ್ರಾರಂಭಕ್ಕೆ, ಹೀಗೆ ಪತಿಯ ಸೊಂಟವನ್ನು ಒತ್ತುವರು, ತಲೆಗೆ ಶುಂಠಿಯನ್ನು ಹಚ್ಚುವರು, ಹುಣ್ಣಿನ ಮೇಲೆ ಪಟ್ಟಿಯನ್ನು ಕೂಡಿಸುವರು, ದುರ್ದೈವದಿಂದ ಅವರಿಗೆ ಇಂತಹ ಪ್ರಸಂಗವು ಬಂದರೆ ಅವರು ತಮ್ಮ ಇಡೀ ಜನ್ಮವನ್ನು ಹೇಗೆ ಕಳೆಯಬೇಕು.

**ನಾರದ**:--ನಿಮ್ಮ ಮಗಳು ಹ್ಯಾಗೆ ಮಾಡುತ್ತಾಳೋ, ಹಾಗೆ ಮಾಡಬೇಕು.

**ವಿಶ್ವ**:--ನನ್ನ ಮಗಳೇ! ನನ್ನ ಮಗಳಿಂದ ಹೀಗೆ ಮಾಡಿಸುವೆನೆ? ಮಗಳೇ ನಡೆ, ಈ ದಿವಸ ರಂಭಾಸಾನಿಯ ಮನೆಗೆ ಹಾಡುವದಕ್ಕೆ ಹೋಗಬೇಕಾಗಿದೆ.

**ಮಹಾ**:--ಅಮ್ಮಾ. ನಾನು ಹೊರಗೆ ಹೋದರೆ ನನ್ನ ಪ್ರಾಣನಾಥನ ಸೇವೆಯನ್ನು ಮಾಡುವರಾರು?

**ವಿಶ್ವ**:--ಇವನು ಪ್ರಾಣನಾಥನೇ? ಅಲ್ಲ. ಇವನು ಪ್ರಾಣಘಾತಕನು. ಇವನ ಸೇವೆಯನ್ನು ನೀನು ಮಾಡಬೇಕೆ? ಏಕೆ ಸೇವೆಯನ್ನು ಮಾಡುತ್ತೇನೆಂದು ಗುತ್ತಿಗೆಯನ್ನು ತಗೊಂಡಿರುವಿಯೇನು? ನಾಯಕ

ಸಾನಿಯರಿಂದಾ ಸೇವೆಯನ್ನು ಮಾಡಿಸಿಕೊಳ್ಳುವದಕ್ಕೆ ಅವನು ಪಾತ್ರನಿದ್ದರೆ, ಆತನು ಬೇಕಾದಷ್ಟು ಮಾಡಿಸಿಕೊಳ್ಳಬೇಕು. ನಾವು ಸಿದ್ಧರಿರುವೆವು.

**ನಾರದ:**--ದೇವಿ ತಾವೇಕೆ ಸಿದ್ಧತೆಯನ್ನು ಮಾಡುತ್ತೀರಿ? ನಮ್ಮ ಧನಿಯರಿಗೆ ನಿಮ್ಮ ಸೇವೆಯೇ ಬೇಡಾಗಿರುವದು.

**ಈಶ್ವರ:**--ಮಹಾನಂದೆ !

**ಮಹಾ:**--ಮಹಾರಾಜ !

**ಈಶ್ವರ:**--ಮಹಾನಂದೆ ನೀನು ಗಾಯನ ಕಲೆಯಲ್ಲಿ ಚನ್ನಾಗಿ ಪ್ರವೀಣಳಾಗಿರುವೆ; ಆದ್ದರಿಂದ ನೀನು ನಿನ್ನ ಸಕಲವಾದ್ಯಗಳನ್ನು ತೆಗೆದು ಕೊಂಡು, ನನಗೆ ಸೊಗಸಾದ ಗಾಯನವನ್ನು ಮಾಡಿ ಕೇಳಿಸು, ಮತ್ತು ಈ ನಿನ್ನ ತಾಯಿಯನ್ನು ಇಲ್ಲಿಂದ ಹೊರಗೆ ಕಳುಹಿಸಿಕೊಡು. ಏಕಂದರೆ ಅವಳ ಶಬ್ದಗಳು ನನಗೆ ಕರ್ಣ ಕಠೋರವಾಗಿರುವವು.

**ಮಹಾ:**--ಅಮ್ಮಾ, ನೀನು ಅಕ್ಕನನ್ನು ಕರೆದುಕೊಂಡು ರಂಭೆಯ ಮನೆಗೆ ಹೋಗು. ನಾನು ಇಲ್ಲಿಯೇ ಕುಳಿತು ಗಾಯನ ಮಾಡುತ್ತೇನೆ. ನನ್ನ ಪ್ರಾಣನಾಥರು ನನ್ನ ಗಾಯನವನ್ನು ಕೇಳತಕ್ಕವರಿದ್ದಾರೆ.

**ವಿಶ್ವ:**--ದೊಡ್ಡ ರಸಿಕನು ಬಂದಿದ್ದಾನೆ, ಗಾಯನವನ್ನು ಕೇಳು ವದಕ್ಕೆ! ಖೋಡಿ ! ಅರಿಷ್ಟಾ !

**ಮಹಾ:**--ಅಮ್ಮಾ ಇನ್ನು ಮೇಲೆ ನೀನು ಅವರಿಗೆ ಕೆಟ್ಟಮಾತು ಗಳನ್ನು ಆಡಿದರೆ ಅವೆಲ್ಲವು ನನಗೆ ಆಡಿದಂತೆ ಆಗುವದು. ನಾನು ನಿನಗೆ ಬೇಕಾಗಿದ್ದರೆ ಅವರಿಗೆ ಹೇಗೆ ನಾನು ಮರ್ಯಾದೆಯನ್ನು ಕೊಡುವೆನೋ ಅದರಂತೆ ನೀನಾದರೂ ಕೊಡುವದು ಯೋಗ್ಯವಾಗಿ ತೋರುವದು.

**ವಿಶ್ವ:**--ನನ್ನದೇನು ಆಗಬೇಕಾಗಿಲ್ಲಾ. ನಮಗೆ ಕಂಕಣವು ದೊರೆ ತಿರುವದು. ಇನ್ನು ಮೇಲೆ ಈ ಮುದಿಪಿಶಾಚಿಯ ಪ್ರತಿಷ್ಠೆಯನ್ನು ಕೇಳುವರಾರು.

**ಮಹಾ:**-- ಯಾರು ಹೊರಗೆ ? ( ಇಬ್ಬರು ಸಿಪಾಯಿಗಳು ಬರುತ್ತಾರೆ ) ಈ ಮಾತೃರೂಪಿಯ ರಾಕ್ಷಸಿಯನ್ನು ಕೈದುಮಾಡಿರಿ. ಅವಳ ಕಾಲೊಳಗೆ

ಬೇಡಿಯನ್ನು ಹಾಕಿರಿ. ತನ್ನ ಜಾವಮಾತಸಿಗೆ ಅಪಶಬ್ದಗಳನ್ನು ಉಚ್ಚರಿಸುವಂಥ ಅವಳ ನಾಲಿಗೆಯನ್ನು ತುಂಡುಮಾಡಿರಿ. ಮತ್ತೂ ತನ್ನ ಮಗಳಿಗೆ ನರಕದ ಮಾರ್ಗವನ್ನು ತೋರಿಸುವಂಥ ಇವಳ ಕೈಗಳಿಗೆ ಬರೆ ಹಾಕಿರಿ ಮತ್ತೂ ಅನ್ನ ನೀರುಗಳಿಲ್ಲದೆ ನೆಲಮನೆಯಲ್ಲಿ ಭದ್ರವಾಗಿಡಿಸರಿ.

**ವಿಶ್ವ**:--ನನ್ನ ಮನೆಯಲ್ಲಿ, ನನ್ನ ಮೇಲೆ ಅಧಿಕಾರ ನಡಿಸಲಿಕ್ಕೆ ನೀನು ಯಾರು ?

**ಮಹಾ**:--ನ್ಯಾಯ ಶಾಸ್ತ್ರದಂತೆ ದತ್ತಕವಿಧಾನವಾದಂದಿನಿಂದ, ಈ ಮನೆಯ ಸಂಪತ್ತಿಗೂ, ಈ ನಂದೀಗ್ರಾಮಕ್ಕೂ, ಅಲ್ಲದೆ ಈ ವೇಶ್ಯೆಯರ ಸಮುದಾಯಕ್ಕೂ, ನಾನು ಸ್ವಾಮಿಣಿಯು; ಹಿರಿಯಳೆಂಬ ಭಾವನೆಯಿಂದ ಇಂದಿನವರೆಗೆ ಮರ್ಯಾದೆಯನ್ನು ಕೊಡುತ್ತಾ ಬಂದೆನು; ಮತ್ತು ನಿನ್ನ ಅನೀತಿಯ ಉಪದೇಶಕ್ಕೆ ದುರ್ಲಕ್ಷ್ಯಮಾಡಿದೆನು; ಆದರೆ ಈಗ ನನ್ನನ್ನು ಬಲಾತ್ಕಾರದಿಂದ ನರಕಕುಂಡಲದಲ್ಲಿ ನೂಕುವದಕ್ಕೆ ಪ್ರಯತ್ನ ಮಾಡಿದ ಮೇಲೆ, ಅಧಿಕಾರವನ್ನು ನನಗೇ ನಡಿಸಲೇಬೇಕಾಗುವದು.

**ವಿಶ್ವ**:--ನೀನು ಈ ಅಧಿಕಾರವನ್ನು ಯಾರ ಮೇಲೆ ನಡೆಸುತ್ತೀ ? ನನ್ನ ಮೇಲೆಯೇ ? ಎನೇ ಯಾವಳು ದೇವರಿಗೆ ಸಾವಿರಾರು ಹರಕೆಗಳನ್ನು ಬೇಡಿಕೊಂಡು ನಿನಗೆ ಈ ಜಗತ್ತನ್ನು ತೋರಿಸಿದಳೋ, ಉಣಿಸಿ ತಿನಿಸಿ ದೊಡ್ಡವಳನ್ನು ಮಾಡಿದಳೋ, ಗಾಯನನರ್ತನವನ್ನು ಕಲಿಸಿ ಅಜ್ಞಾನಗಳನ್ನು ಸುಜ್ಞಾನಗಳನ್ನಾಗಿ ಮಾಡಿದಳೋ; ಆ ನಿನ್ನ ಜನ್ಮದಾತೆಯೂ, ಅನ್ನದಾತೆಯೂ, ಪ್ರಾಣದಾತೆಯೂ ಆದ ತಾಯಿಯ ಮೇಲೆ ಚನ್ನಾಗಿ ಮಾಡುತ್ತೀ.

**ಮಹಾ**:--ಮಕ್ಕಳಿಗೆ ಸನ್ಮಾರ್ಗದ ಶಿಕ್ಷಣವನ್ನು ಕೊಡುವದಕ್ಕೋಸ್ಕರ, ಪರಮೇಶ್ವರನು, ತಂದೆ-ತಾಯಿಗಳನ್ನು ನೇಮಿಸಿರುತ್ತಾನೆ. ಅವರೇ ಒಂದು ವೇಳೆ ದುಷ್ಕರ್ಮ ಮಾಡುವದಕ್ಕೆ ಕಲಿಸಿದರೆ, ಅಂಥ ತಂದೆ-ತಾಯಿಗಳನ್ನು, ಮಕ್ಕಳನ್ನು ಬಿಟ್ಟು ದೂರ ಮಾಡುವದೇ ಲೇಸು. ಹೊಲದ

ರಕ್ಷಣಾರ್ಥವಾಗಿ ಬೇಲಿಯನ್ನು ಹಚ್ಚುತ್ತಾರೆ; ಆದರೆ ಆ ಬೆಲೆಯೇ ಹೊಲವನ್ನು ತಿನ್ನುವದಕ್ಕೆ ಆರಂಭಿಸಿದರೆ ಆ ಬೇಲಿಯನ್ನು ಸುಟ್ಟುಬಿಡಲೇಬೇಕು.

**ವಿಶ್ವ:**—ಒಳ್ಳೇದಮ್ಮಾ, ಇನ್ನು ಮೇಲೆ ನಿನ್ನ ಕಾರ್ಯದಲ್ಲಿ ತಿಲಮಾತ್ರವಾದರೂ ಮನಸ್ಸು ಹಾಕುವದಿಲ್ಲಾ; ನಿನಗೆ ಬೇಕಾದಹಾಗೆ ಮಾಡು; ಇನ್ನಾದರೂ ಆಯಿತೇ. ಇಗ್ಗೆ ನಿನ್ನ ಮುಂದೆ ಕೈಜೋಡಿಸುತ್ತೇನೆ ಸೆರೆಗೊಡ್ಡಿ ಬೇಡುತ್ತೇನೆ.

**ಮಹಾ:**—ಎಲೋ ಅವಳನ್ನು ಬಂಧಮುಕ್ತಳನ್ನು ಮಾಡಿರಿ. ತುಂಬಾ ಆ ತಂಬೂರಿಯನ್ನು ತೆಗೆದುಕೊಂಡು ಬಾ, ಹಾಡುವದಕ್ಕೆ ಪ್ರಾರಂಭಿಸೋಣ.

ರಾಗ ಮಿಶ್ರ, ತಾಳ ತ್ರಿವಟ.

**ಕೈಲಾಸವಾಸ ಗೌರೀನಿವಾಸ। ಜ್ವಲನ ನಯನ ರುಂಡಮಾಲ। ಸುಮಶರದಹನ ಜೀವೇಶಾ ॥ಪಲ್ಲ॥ ಪ್ರಣಯ ಪ್ರಿಯತಮಾ। ದಾಸಿಯು ನಾ। ವಿನಯದಿ ನಮಿಸುವೆ। ವನಜ ಮುಖವ ಸಲೆ ತೋರು। ಪ್ರಿಯ ನಾಥಾ। ನಿಗಮ ಸನ್ನುತಾ ॥೧॥**

**ಈಶ್ವರ:**—ಸಾಕು ಸಾಕು ಹೀಗೆ ಹಾಡಲಿಕ್ಕೆ ಬರುವದೇನು ? ಹೀಗೆ ಪಶುಗಳಿಗೆ ಸಹ ಹಾಡಲಿಕ್ಕೆ ಬರುತ್ತದೆ; ಈ ಗಾಯನದಿಂದ ಯಾರಿಗೆ ಆನಂದವಾಗುತ್ತದೆಯೋ ಕಾಣೆ.

**ನಾರದ:**—ಪಶುಪತಿಗೆ ! ಮತ್ಯಾರಿಗೆ ಆನಂದವೆನಿಸುವದು ?

**ಈಶ್ವರ:**—ಸಾಕುಮಾಡು ಆ ಗಾಯನವನ್ನು; ಆ ತಂಬೂರಿಯನ್ನು ತಗೆದಿಟ್ಟು, ಆ ಹುಡುಗೆಯನ್ನು ಹೊರಗೆ ಹಾಕಿಬಿಡು; ಅವಳ ಗಾಯನವಂತೂ ನನಗೆ ತೀರಾ ಬೇಸರವಾಯಿತು. ಅದರ ಯೋಗದಿಂದ ನನ್ನ ತಲೆನೋವು ಹೆಚ್ಚಾಯಿತು.

**ನಾರದ:**—ಬನ್ನಿಸ್ವಾಮಿ ದೇವಲೋಕದ ಗಂಧರ್ವ ಶಿಖಾಮಣಿಗಳೇ, ಕೊನೆಗೆ ತಾವು ಮೃತ್ಯುಲೋಕದ ಪಶುಗಳೇ ಆದಿರಿ.

**ಈಶ್ವರ:**—ನನ್ನ ಮನಸ್ಸಿಗೆ ಸಮಾಧಾನವಾಗುವಂತೆ, ಒಂದು

ಗುಣವಾದರೂ ನಿನ್ನ ಅಂಗದಲ್ಲಿ ಕಾಣುವದಿಲ್ಲವಲ್ಲ. ನಾನು ಅಮೌಲ್ಯವಾದ ಕಂಕಣವನ್ನು ಕೊಟ್ಟು ಏನೂ ಉಪಯೋಗವಿಲ್ಲದ ಹೆಂಡತಿಯನ್ನು ಮಾಡಿ ಕೊಂಡಂತಾಯಿತು.

**ಮಹಾ:**—ಮಹಾರಾಜ! ಈ ತಮ್ಮ ದಾಸಿಯು, ಯಾವುದನ್ನೂ ಅರಿಯಳು; ಅವಳ ಮೇಲೆ ಕೃಪೆಯನ್ನು ಮಾಡಿ, ತಮಗೆ ಹಿತಕರವಾಗುವಂತೆ ಸೇವೆಯನ್ನು ಮಾಡುವದಕ್ಕೆ ಕಲಿಸಬೇಕು; ಅಂದರೆ ನಾನು ಅದರಂತೆ ಮಾಡುತ್ತೇನೆ.

**ಈಶ್ವರ:**—ಹಾಗಾದರೆ ನಾನು ಇದಕ್ಕೋಸ್ಕರ, ಸ್ತ್ರೀಯರ ಶಾಲೆ ಯನ್ನೇ ಹಾಕಬೇಕಾಯಿತು. ಒಳ್ಳೇದು. ಈ ವ್ಯಾಘ್ರಾಂಬರವನ್ನು ನಿನ್ನ ಮಂಚದ ಮೇಲೆ ಹಾಕು; ಅಂದರೆ ಅದರ ಮೇಲೆ ಸುಖದಿಂದ ನಿದ್ರೆಬರು ವದು. (ಅವಳು ಹಾಗೆ ಮಾಡುತ್ತಾಳೆ) ಎದ್ದು ಅಹಾಹಾ ನನ್ನ ಮುದ್ದಿನ ಅರಗಿಣಿಯೇ! ನಿನ್ನ ಕಂಠ ಮಾಧುರ್ಯಕ್ಕೆ ಕೋಗಿಲೆಗಳು ಸಹ ನಾಚಿ ಕೊಳ್ಳುವವು; ನಿನ್ನ ಗಾಯನಕುಶಲತೆಯನ್ನು ಕೇಳಿ ಗಂಧರ್ವರು ಸಹ ತಲೆ ದೂಗುವರು; ದೇವೀ ದಾಕ್ಷಾಯಣೀ, ನೀನು ಯಾವದೇ ವೇಷದಿಂದ ಯಾವ ವ್ಯವಸಾಯದಲ್ಲಿದ್ದರೂ, ನನ್ನ ವಿಷಯದಲ್ಲಿದ್ದ ನಿನ್ನ ಪ್ರೇಮವನ್ನು ನೋಡಿ, ನನಗೆ ಎಷ್ಟು ಆನಂದವಾಗುವದೆಂದು ಹೇಳಲಿ.

**ನಾರದ:**—ಮಹಾರಾಜ! ಇನ್ನು ಮೇಲೆ ಮಾತೋಶ್ರೀಯ ಪರೀಕ್ಷೆ ಯನ್ನು ಮಾಡುವದು ಸಾಕುಮಾಡಿರಿ.

**ಈಶ್ವರ:**—ಇವಳ ಸತ್ವಹರಣಮಾಡುವದಕ್ಕೆ ಮತ್ತೊಂದು ಉಪಾಯವಿರುವದು.

**ನಾರದ:**—ಇಂದಿನವರೆಗೆ ಎಷ್ಟೋ ಉಪಾಯಗಳನ್ನು ಮಾಡಿದರೂ, ಅವೆಲ್ಲಾ ನಿಷ್ಫಲವಾದವು, ಅದರಂತೆ ಅದೂ ಆಗುವದು. ಮತ್ತೇನು?

**ಈಶ್ವರ:**—ನಾರದಾ, ನನ್ನ ಕಿಂತಲೂ ಗಿರಿಜೆಯ ಕಡೆಗೆ ನಿನ್ನ ಪಕ್ಷವು ಹೆಚ್ಚಾಗಿ ತೋರುವದು—ಅಂತೇ ನನಗೆ ಯಶದೊರೆಯುವದಿಲ್ಲಾ. ನೀನು ಇಲ್ಲಿಂದ ಹೊರಟುಹೋಗು.

**ತುಂಬುರ**:--ನಾರದ ಸ್ವಾಮಿಗಳೇ! ತಾತಮಹಾರಾಜರ ಅಪ್ಪಣೆಯಂತೆ ನಾವು ಇಲ್ಲಿಂದಾ ಹೊರಟುಹೋಗುವಾ, ನಡೆಯಿರಿ.

**ಈಶ್ವರ**:--ನಾರದಾ, ತುಂಬುರಸ್ವಾಮಿ ಅಂದರೆ ಈತನೇ ಏನು; ತುಂಬುರಾ ನೀನು ನಿರುಪದ್ರವಿಯೆಂದು ಇಂದಿನವರೆಗೆ ನಾನು ತಿಳಿದಿದ್ದೆನು; ಆದರೆ ಈಗ ನೋಡಿದರೆ ನೀನು ನಾರದನಗಿಂತಲೂ ಹೆಚ್ಚು ಉಪದ್ವ್ಯಾಪಿಯು.

**ತುಂಬುರ**:--ತಾತಾ ಏತರದು ಏತರದು? ಇದು ನಾರದಸ್ವಾಮಿಗಳ ಶಿಕ್ಷಣದ ಪರಿಣಾಮವು (ಹೋಗುವರು.)

**ಈಶ್ವರ**:--ಅಪರ್ಣೆ, ನಿನ್ನ ಕೂಡ ನಾನು ಕಪಟಾಚಾರ ಮಾಡಿರುತ್ತೇನೆ; ಅದರ ಬಗ್ಗೆ ನನ್ನನ್ನು ಕ್ಷಮಿಸು; ನನ್ನ ಕಾಪಟ್ಯದಿಂದಾ ನಿನಗೆ ಕೆಲವು ಕಾಲ ಕಷ್ಟವಾಗುವದು; ಆದರೆ ಅದರೊಳಗಿಂದ ನೀನು ಪಾರಾದಿಯೆಂದರೆ, ನನ್ನ ಕೃಪೆಯ ಆದಿಸ್ಥಾನವಾಗಿ, ಜಗತ್ತಿನೊಳಗಿನ ವಾರಾಂಗನೆಯರಿಗೆ ನೀನು ಸನ್ಮಾರ್ಗದರ್ಶಕಳಾಗುವೆ. ನಾನು ಮಾಡುವದೆಲ್ಲವು ಮತ್ಸರವೆಂದು ತಿಳಿಯಬೇಡಾ, ಕೇವಲ ಪ್ರೇಮಾಂತಃಕರಣದಿಂದ ಮಾಡುತ್ತೇನೆ. ಇದಕ್ಕೆ ನಿನಗೆ ಸಾಕ್ಷಿ ಬೇಕಾದರೆ, ಈ ನಿನ್ನ ಕಪೋಲರೂಪಿ ಸುವರ್ಣಪತ್ರದ ಮೇಲೆ, ನನ್ನ ದಂತಗಳಿಂದ ಪಂಚಭೂತಾತ್ಮಕ ಸಾಕ್ಷಿಯಾಗಿ ಹೀಗೆ ಬರೆದಿಡುತ್ತೇನೆ. (ಎದ್ದು ಚುಂಬಿಸುವನು. ಮಹಾನಂದೆಯು ಎಚ್ಚರವಾಗುವಳು)

**ಮಹಾ**:--ಅಯ್ಯೋ ಬನ್ನಿರಿ ಬನ್ನಿರಿ ಈ ಸುಟ್ಟನೋರೆಯುವನು.

**ಈಶ್ವರ**:--ಮಹಾನಂದೆ ಏನಾಯಿತು? ನಾನು ನಿನ್ನನ್ನು ಚುಂಬಿಸಿದೆನು. ಅದು ನಿನಗೆ ಅಸಹ್ಯವಾಯಿತೇ? ದುರ್ಗಂಧವೆನಿಸಿತೇ?

**ಮಹಾ**:--ಇಲ್ಲ ಪ್ರಾಣನಾಥಾ, ತಾವು ನನ್ನನ್ನು ಚುಂಬಿಸಿದರಿಂದ ನಾನು ಪವಿತ್ರಳಾದೆನು. ಅದರಂತೆ ಯಾವಾಗಲೂ ವಾರಾಂಗನೆಯ ಜನ್ಮದಿಂದ ದೂಷಿತವಾದ ಈ ಸರ್ವಾಂಗವನ್ನು ಆಲಿಂಗಿಸಿಕೊಂಡಿದ್ದರೆ, ಕೃತಕೃತ್ಯಳಾಗುತ್ತಿದ್ದೆನು.

**ಈಶ್ವರ**:--ಏನೇ ನಾನು ಚುಂಬಿಸಿದ ಕೂಡಲೇ ಭಯಭೀತಳಾದ ಕಾರಣವೇನು?

**ಮಹಾ**:--ಆ ಕಾಲಕ್ಕೆ ನಾನು ಸ್ವಪ್ನಮಯಸ್ಮೃತಿಯಲ್ಲಿದ್ದೆನು. ಮತ್ತೂ ನನಗೆ

ರಾಗ ಬಿಭಾಸ, ತಾಳ ತ್ರಿವಟ.

**ಭಾಸವಾಯ್ತೇ ಕಾಳಸರ್ಪನಲಿದು ಅಲೆದು। ಕಚ್ಚಿತು ತಾಯನ್ನನು ಬಿಡದೇ॥ ಪಲ್ಲ॥ ಭ್ರಾಂತಚಿತ್ತದಿಂ ಜಾಗ್ರತಳಾದೆ। ಕಾಂತನು ಸಂತೋಷದಿ ರದನದಿಂ ಚುಂಬನ ಗೈಯುತಿರೆ ॥೧॥**

**ಈಶ್ವರ**:--ಈಗ ನಿನಗೂ ನಿದ್ರೆಬಂದಿರುವದು, ಮತ್ತೂ ನನಗೂ ಬಂದಿರುವದು. ಇದೋ ಕೊರಳೊಳಗಿನ ದಿವ್ಯಲಿಂಗನವನ್ನು ಕೊಡುತ್ತೇನೆ, ಇದು ನನ್ನ ಪ್ರಾಣಲಿಂಗವು, ಇದನ್ನು ಶಯನಕಾಲಕ್ಕೆ ಬಳಿಯಲ್ಲಿಟ್ಟುಕೊಳ್ಳಬಾರದು, ಇದನ್ನು ಯಾರಿಗೂ ಕಳ್ಳತನಮಾಡುವದಕ್ಕೆ ಬಾರದಂತೆಯೂ, ಮೈಲಿಗಾಗದಂತೆಯೂ, ಯಾವದೇ ಕಾರಣದಿಂದ ನಷ್ಟವಾಗದಂತೆ ಭದ್ರವಾಗಿರಿಸಬೇಕು ತಿಳಿಯಿತೇ?

**ಮಹಾ**:—ಒಳ್ಳೇದು! ಇದನ್ನು ನಾನು ನನ್ನ ನರ್ತನ ಶಾಲೆಯಲ್ಲಿಡುತ್ತೇನೆ. ಅಲ್ಲಿ ಯಾರೂ ಬರುವದಿಲ್ಲಾ.

**ಈಶ್ವರ**:—ನೋಡು ಅದು ನಷ್ಟವಾದರೆ, ನಾನು ನನ್ನ ಪ್ರಾಣವನ್ನೇ ಕಳೆದುಕೊಳ್ಳುವೆನು.

**ಮಹಾ**:—ಹೀಗೆ ಅಭದ್ರಮಾತಾಡಬಾರದು. ಅದನ್ನು ನಾನು ನನ್ನ ದೇವರಕ್ಕಿಂತಲೂ ಹೆಚ್ಚಾಗಿ ಜೋಕೆ ಮಾಡುತ್ತೇನೆ.

**ಈಶ್ವರ**:—ನಂದಿ, ಶೃಂಗಿ, ಭೈರವ ಮೊದಲಾದ ಪ್ರಿಯಗಣಗಳಿರಾ, ಇವಳು ನರ್ತನ ಶಾಲೆಯಲ್ಲಿ ಪ್ರಾಣಲಿಂಗವನ್ನಿಟ್ಟು ಬಂದ ಕೂಡಲೇ, ನೀವು ಅದೃಶ್ಯರೂಪದಿಂದಾ ನರ್ತನ ಶಾಲೆಗೆ ಬೆಂಕಿಯನ್ನು ಹಚ್ಚಬೇಕು. (ಮಲಗುತ್ತಾನೆ)

**ಮಹಾ**:—ಏನಾಶ್ಚರ್ಯವು! ಇಷ್ಟರಲ್ಲಿಯೇ ಇವರಿಗೆ ನಿದ್ರೆಹತ್ತಿತು. ದೇವಾ! ಮಹಾದೇವಾ! ನೀನು ಅಂಥಾ ಕಾಲಕೂಟ ವಿಷವನ್ನೇ ಪ್ರಾಶನ

ಮಾಡಿ, ಜಗತ್ರಯದ ಜ್ವಾಲೆಯನ್ನು ಶಾಂತಮಾಡಿದೆ; ಆದರೆ ನಿನ್ನ ಒಂದೇ ಕೃಪಾಕಟಾಕ್ಷದಿಂದ, ಈ ನನ್ನ ಪ್ರಾಣೇಶ್ವರನ ದೇಹವನ್ನು, ನಾಶಮಾಡುವಂಥ, ಈ ದುಷ್ಟರೋಗವನ್ನು ದಹಿಸಿಬಿಡಬಾರದೇ; ಭಕ್ತರಕ್ಷಕನೆಂಬ ಬಿರುದು, ನಿನಗಿರುವದಿಲ್ಲವೇ; ಅಂದ ಮೇಲೆ ಈ ದೀನದಾಸಿಯ ಮೇಲೆ ನಿಷ್ಠುರತನವೇಕೆ? ಪ್ರಭುವೇ! ಇನ್ನು ಮೇಲೆ ನನ್ನ ಪರೀಕ್ಷೆಯನ್ನು ಮಾಡಬೇಡಾ

ರಾಗ ಕರ್ನಾಟಕೀ ತೋಡಿ, ತಾಳ ತ್ರಿತಾಳ.

**ನಿಟಿಲ ಲೋಚನ ಗಂಗಾ। ಧರ ವಾಮದೇವಾ ॥ ಪಲ್ಲ ॥**
**ದುರುಳ ಜನ್ಮದ ಬಾಧೆಯಾ। ನೆರೆನೋಡಿ ಪಾಲಿಸೋ ॥**
**ಮದನ ದಹನಾ। ಶಾಂತ ಸದನಾ। ಜ್ವಲನ ನಯನಾ।**
**ವೇದಮಾನ್ಯಾ ॥ ೧ ॥**

(ಮಲಗುತ್ತಾಳೆ; ಅಷ್ಟರಲ್ಲಿ ಬೆಂಕಿ ಹತ್ತಿರುವದೆಂದು ವಿಶ್ವಮೋಹಿನಿ ಸದಾನಂದೆಯು ಬರುತ್ತಾರೆ.)

**ವಿಶ್ವ:**—ಮಹಾನಂದೆ ಏಳು ಏಳು! ನಮ್ಮ ನರ್ತನಶಾಲೆಗೆ ಬೆಂಕಿ ಹತ್ತಿರುವದು; ಏಳು ಏಳು; ಆಳಿಯ ದೇವರೇ! ಬೆಂಕಿಹತ್ತಿರುವದು, ಬೇಗನೇ ಏಳಿರಿ!

**ಮಹಾ:**—ದುಷ್ಟಚಾಂಡಾಲಿಯೇ, ನನ್ನ ಪ್ರಾಣನಾಥರಿಗೆ, ಈಗ ಸ್ವಲ್ಪ ಜಂಪುಹತ್ತಿತ್ತು, ನಿನಗೆ ನೋಡುವದಾಗಲಿಲ್ಲವೇ?

**ಸದಾ:**—ತಂಗೀ ಅದನ್ನೇನು ಮಾಡುತ್ತೀ? ಅದೋ ನೋಡು ಅಗ್ನಿಯ ಜ್ವಾಲೆಯಿಂದಾ ನಮ್ಮ ನರ್ತನಶಾಲೆಯು ಸುಟ್ಟುಹೋಯಿತು.

**ಮಹಾ:**—ಅಯ್ಯೋ ಪ್ರಾರಬ್ಧವೇ! ಘಾತವಾಯಿತು! ಘಾತವಾಯಿತು! ಪ್ರಾಣನಾಥರ ದಿವ್ಯಲಿಂಗವು ನರ್ತನಶಾಲೆಯಲ್ಲಿ ದಗ್ಧವಾಗಿ ಹೋಯಿತು.

**ಈಶ್ವರ:**—ಎಲೇ ಚಾಂಡಾಲಿಯೇ! ನಿನ್ನ ಕಾಪಟ್ಯವು ನನಗೆ ಈಗ

ತಿಳಿಯಿತು. ನನ್ನ ಪ್ರಾಣಲಿಂಗವನ್ನು ಇಲ್ಲೇ ಇಡುವದನ್ನು ಬಿಟ್ಟು ನರ್ತನ ಶಾಲೆಯಲ್ಲಿಡುತ್ತೇನೆಂದು ಮಿಥ್ಯಾಭಾಷಣ ಮಾಡಿ, ಅದನ್ನು ಎಲ್ಲಿಯೋ ಬಚ್ಚಿಟ್ಟು, ನೀನೇ ನರ್ತನಶಾಲೆಗೆ ಬೆಂಕಿಯನ್ನು ಹಚ್ಚಿ, ನನ್ನ ಸನ್ನಿಧಿಯಲ್ಲಿ ಮಲಗಿರುವಿಯಾ?

ರಾಗ ಮಾಲಕಂಸ, ತಾಳ ತ್ರಿವಟ

**ಆತ್ಮಲಿಂಗವ ದಹಿಸಿದೇ॥ ನಿಜಲಿಂಗವ ದಹಿಸಿದೆ। ಪತಿಘಾತವಾಗೈದೆ ಕುಟಿಲೇ ॥ ಪಲ್ಲ॥ ವಾರವನಿತೇ ಸಾಧ್ವಿಯಂತೇ। ತೋರಿ ಮೋಸಾ ಮಾಡಿದೇ॥ ನೆರೆಮೋಹಿಸಿ ಧನದಾಸೆಗೇ। ಪತಿಘಾತವಾ ಗೈದೆ ಕುಟಿಲೇ ॥ ೧॥**

ಪ್ರಾಣಲಿಂಗವನ್ನು ಎಲ್ಲಿ ಬಚ್ಚಿಟ್ಟಿರುವೆ? ಅದನ್ನು ಬೇಗನೆ ಕೊಡು. ಅಂದರೆ ನಾನು ಬೇಗನೆ ಹೊರಟುಹೋಗುತ್ತೇನೆ. ನಿನ್ನ ಸಾಧ್ವಿತನವು ತಿಳಿದಂತಾಯಿತು. ಪ್ರಾಣಲಿಂಗವನ್ನು ಕೊಡು! ಬೇಗನೇ ಕೊಡು.

**ಮಹಾ:** ಇಲ್ಲ ಮಹಾರಾಜ! ನಾನು ನಿಜವಾಗಿಯೂ ಕಪಟವನ್ನು ಮಾಡುವದಿಲ್ಲಾ, ತಮ್ಮ ಚರಣಸಾಕ್ಷಿಯಾಗಿ ಹೇಳುತ್ತೇನೆ (ಪಾದಗಳ ಮೇಲೆ ತಲೆಯನ್ನಿಡುವಳು.)

**ಈಶ್ವರ:**— (ಕಾಲಿನಿಂದ ಒದ್ದು) ಪ್ರಾಣವನ್ನು ಲಕ್ಷ್ಯಮಾಡದೆ ಯಾವಳು ನನ್ನ ಪ್ರಾಣಲಿಂಗವನ್ನು ಸುಟ್ಟು ನನ್ನ ಜೀವದ ಮೇಲೆ ಪ್ರಸಂಗ ತಂದಿರುವಳೋ, ಅಂಥವಳು ನನ್ನ ಪಾದಗಳ ಬೆಲೆಯನ್ನು ಏನು ತಿಳಿಯುವಳು!

**ಮಹಾ:**—ಮಹಾರಾಜ ಹೀಗೆ ಮಾತಾಡಬೇಡರಿ; ರೋಷದಿಂದ ಸಂತಪ್ತರಾದರೆ ತಮ್ಮ ದೇಹಕ್ಕೆ ಹೆಚ್ಚು ಕಷ್ಟವಾಗುವದು; ಅದು ನನ್ನಿಂದ ಸಹಸವಾಗುವದಿಲ್ಲಾ.

**ಈಶ್ವರ:**—ಹಾಗಾದರೆ, ನನ್ನ ಪ್ರಾಣಲಿಂಗವನ್ನು ದಗ್ಧಮಾಡಿದಂಥಾ ಅಗ್ನಿನಾರಾಯಣನಿಗೆ, ಈ ದೇಹವನ್ನು ಸಮರ್ಪಿಸಿ, ನಿನ್ನ ಮನಸ್ಸು ಶಾಂತ ಮಾಡುತ್ತೇನೆ. (ಓಡಿ ಹೋಗುತ್ತಾನೆ. ಅವನನ್ನು ತಡೆದು)

**ಮಹಾ:**—ಬೇಡ ಬೇಡಾ; ತಮ್ಮ ಜೀವಕ್ಕೇನೂ ಅಪಾಯಮಾಡಿ ಕೊಳ್ಳಬಾರದು, ಬೇಡರಿ.

**ಈಶ್ವರ:**—ಚಾಂಡಾಲಿಯೇ! ಪತಿಪ್ರಾಣಘಾತಕಿಯೇ! ಇನ್ನು ಮೇಲೆ ನನ್ನ ದೇಹಕ್ಕೆ ಸ್ಪರ್ಶಮಾಡಬೇಡಾ; ಬಿಡು ಮೊದಲು; ಇಲ್ಲದಿದ್ದರೆ ಮೊದಲು ನಿನ್ನ ಪ್ರಾಣವನ್ನು ತಕ್ಕೊಂಡು, ಆ ಮೇಲೆ ನಾನು ಪ್ರಾಣವನ್ನು ಕೊಡುವೆನು.

**ಮಹಾ:**—ನಾನು ನಿಮ್ಮನ್ನು ಎಂದಿಗೂ ಬಿಡುವದಿಲ್ಲಾ; ತನ್ನ ಪತಿಯ ಕೈಯಿಂದಾ ಮರಣ ಬರುವಂಥ ಅಮೃತಸಂಧಿಯನ್ನು ನಾನು ಎಂದಿಗೂ ಕಳೆದುಕೊಳ್ಳಲಾರೆನು. ಪ್ರಾಣನಾಥಾ! ಬೇಗನೆ ನನ್ನ ಪ್ರಾಣ ವನ್ನು ತಕ್ಕೊಳ್ಳಿರಿ; ನನ್ನ ಅಮಂಗಲ ಶರೀರವು, ತಮ್ಮ ಜತೆಗೆ ಬರುವದಕ್ಕೆ ಯೋಗ್ಯವಿರದಿದ್ದರೆ, ನನ್ನ ಪ್ರಾಣವನ್ನು ತಾವೇ ತೆಗೆದುಕೊಂಡು ಹೋಗ ಬೇಕು; ಈ ಪಾಪಿಯಾದ ದೇಹಕ್ಕೆ ತಮ್ಮ ಸಹವಾಸವು ಬಹಳೇ ಅಲ್ಪಕಾಲ ಸಂಘಟಿಸಿತು! ನನ್ನ ಪ್ರಾಣವು ತಮ್ಮದೇನು ಅಪರಾಧ ಮಾಡಿರುವದು?

**ಈಶ್ವರ:**—ಎಲೋ ನೀವೆಲ್ಲರೂ ಹೀಗೇಕೆ ನೋಡುತ್ತ ನಿಂತಿರುವಿರಿ? ನಾನು ನಿಜವಾಗಿಯೂ ಈ ಪ್ರಜ್ವಲಿತ ಅಗ್ನಿಯಲ್ಲಿ ನನ್ನ ಪಂಚಪ್ರಾಣಗಳನ್ನು ಆಹುತಿಕೊಡತಕ್ಕವನೇ; ಆದ್ದರಿಂದ ಇವಳನ್ನು ನನ್ನಿಂದ ದೂರ ಮಾಡಿರಿ; ಈ ಲಾವಣ್ಯದ ಖಣಿಯು ನಿಮ್ಮೆಲ್ಲರ ಪಂಚಪ್ರಾಣವು. ಇದು ವ್ಯರ್ಥವಾಗಿ ಈ ರೋಗಿಷ್ಠ ದರಿದ್ರನ ಜತೆಗೆ ಸುಟ್ಟುಹೋಗುವದು. ನನ್ನಿಂದ ಬಿಡಿಸಿ ತೆಗೆದುಕೊಂಡು ಹೋಗಿರಿ.

**ವಿಶ್ವ:**—ಮಹಾನಂದೇ ಇತ್ತ ಬಾ! ಬಿಡು ಅವರನ್ನು.

**ಮಹಾ:**—ಯಾರೂ ನನ್ನ ಸ್ಪರ್ಶಮಾಡಬೇಡರಿ, ನಾನು ನನ್ನ ಪ್ರಾಣ ನಾಥರ ಕೂಡಾ ಅಕ್ಷಯವಾದ ಸುಖಶಾಂತಿಯನ್ನು ಹೊಂದುವದಕ್ಕೆ ಹೋಗುತ್ತೇನೆ; ನನ್ನನ್ನು ಯಾರಾದರೂ ತಡೆದರೆ, ನೀವು ನನ್ನನ್ನು ಸ್ವರ್ಗದ ಮಹಾದ್ವಾರದಿಂದ ಸೆಳೆದು, ರವರವ ನರಕಕುಂಡದಲ್ಲಿ ಹಾಕಿದಂತೆ ಆದೀತು;

ಇದರ ಬಗ್ಗೆ ಪೂರ್ಣ ವಿಚಾರ ಮಾಡಿರಿ, ಮತ್ತೂ ನನಗೆ ಇವರ ಜೊತೆಯಲ್ಲಿ ಹೋಗುವದಕ್ಕೆ ಅಪ್ಪಣೆಯನ್ನು ಕೊಡಿರಿ.

**ವಿಶ್ವ**:--ಮಗಳೇ ನಿನ್ನ ಯಜಮಾನರು, ಅಗ್ನಿಯಲ್ಲಿ ಹಾರಿಕೊಳ್ಳಲಿಕ್ಕೆ ಹೋಗುತ್ತಾರೆ. ಅವರ ಜೊತೆಗೆ ಹೋಗಿ ನೀನೇನು ಮಾಡತಕ್ಕವಳು?

**ಮಹಾ**:--ಏನಂದರೆ! ನಾನೂ ಅವರ ಜೊತೆಯಲ್ಲಿ ಸಹಗಮನ ಮಾಡತಕ್ಕವಳು. ಪೂರ್ವದ ನಾಲ್ವತ್ತೆರಡು ಕುಲಗಳನ್ನು ಉದ್ಧರಿಸುವೆನು, ಯಾವತ್ತೂ ಜಗತ್ತಿಗೆ ಪಾತಿವೃತ್ಯದ ಮಹಿಮೆಯನ್ನು ತೋರಿಸುವೆನು, ಇದೇ ರೀತಿಯಿಂದಲೇ ಈ ದೇಹದ ಸಾರ್ಥಕವನ್ನು ಮಾಡಿಕೊಳ್ಳುವೆನು.

**ವಿಶ್ವ**:—ಹುಚ್ಚಿ, ನೀನು ಇದನ್ನೇನು ಪ್ರಾರಂಭಿಸಿರುವೆ? ಇಂದಿನ ವರೆಗೆ ಯಾವ ವಾರಾಂಗನೆಯು ತನ್ನ ಯಜಮಾನನ್ನು ಪತಿಯೆಂದು ಭಾವಿಸಿ, ಅವನ ಕೂಡಾ ಪಾತಿವೃತ್ಯದಿಂದ ವರ್ತಿಸಿರುವಳು, ಮತ್ತೂ ಅವನು ಮೃತನಾದರೆ ಅವನ ಕೂಡಾ ಯಾವಳು ಸಹಗಮನ ಮಾಡಿರುವಳು?

**ಮಹಾ**:—ಆದ್ದರಿಂದಲೇ, ಇಂದಿನವರೆಗೆ ಯಾರೂ ಮಾಡದೇ ಇದ್ದ ಕಾರ್ಯವನ್ನು ಮಾಡಿ, ನನ್ನ ಪ್ರಿಯ ಭಗಿನಿಯರಿಗೆ ಅವರ ಕಲ್ಯಾಣದ ಮಾರ್ಗವನ್ನು ತೋರಿಸುತ್ತೇನೆ.

**ವಿಶ್ವ**:—ಅಮ್ಮಾ ನೀನೇನು ಮಾತಾಡುತ್ತೀ ಅದು ನನಗೆ ಏನೂ ತಿಳಿಯದಂತಾಗಿದೆ.

**ನಾರದ**:—ಅದೇಕೆ, ಇದು ಸಣ್ಣ ಸಣ್ಣ ಹೆಣ್ಣುಮಕ್ಕಳಿಗೆ ಸಹ ತಿಳಿಯುವದು.

**ತುಂಬುರ**:—ಅಮ್ಮನವರೇ! ನೀವು ಈ ದಿವಸ ದೇವಿಯವರ ಗೊಡವಿಗೆ ಹೋಗಬೇಡಿರಿ, ಅವರು ಬೇಕಾದಂತೆ ಮಾಡಲಿ.

**ಸದಾ**:—ಛೀ ಹುಚ್ಚ ಶಟವಿಯೇ, ನೀನೇ ಅವಳ ಕಿವಿಯನ್ನು ಊದಿ ಅವಳನ್ನು ಕೆಡಿಸಿದವಳು.

**ಮಹಾ**:—ಅಕ್ಕಾ ಅವಳಿಗೆ ಹಾಗೆ ಮಾತಾಡಬೇಡಾ. ಅವಳು ನನ್ನ ಹುಚ್ಚುತನವನ್ನು ಹೋಗಲಾಡಿಸಿ, ಬುದ್ಧಿವಂತಳನ್ನು ಮಾಡಿದಳು;

ದುರ್ಗುಣಿಯುನ್ನು ಸದ್ಗುಣಿಯುನ್ನಾಗಿ ಮಾಡಿದಳು; ವಿಶೇಷವೇನು ಹೇಳಲಿ, ವಾರಾಂಗನೆಯರಾದ ನಮ್ಮನ್ನು ಪತಿವ್ರತೆಯರನ್ನಾಗಿ ಮಾಡಿದಳು.

**ಈಶ್ವರ**:—ಮಹಾನಂದೆ ನನ್ನನ್ನು ಬಿಡುವಿಯೋ ಇಲ್ಲವೋ ?

**ಮಹಾ**:—ಇಲ್ಲ ಮಹಾರಾಜ.

**ಈಶ್ವರ**:—ನೀನು ಪತಿವ್ರತೆಯಲ್ಲವೇ ?

**ಮಹಾ**:—ಹೌದು ಮಹಾರಾಜ.

**ಈಶ್ವರ**:—ಹಾಗಾದರೆ ನಿನ್ನ ಪತಿಯು ಮನಸ್ಸಿನಲ್ಲಿ ಪ್ರಾಣತ್ಯಾಗ ಮಾಡಬೇಕೆಂದಿರುವದು, ಅದನ್ನು ತಡೆಯುವದು ನಿನ್ನ ಧರ್ಮವೇ ?

**ಮಹಾ**:—ಮಹಾರಾಜ ನಾನು ತಡೆಯುವದಿಲ್ಲಾ. ಪ್ರಾಣತ್ಯಾಗ ಮಾಡುವದಕ್ಕೆ ಪ್ರತಿ ಸಹಾಯುವನ್ನೇ ಮಾಡುವೆನು.

**ಈಶ್ವರ**:—ನಿನ್ನಂತಹ ಪ್ರತಿವ್ರತೆಯು ಪ್ರಾಣತಕ್ಕೊಂಡರೆ, ನನಗೆ ಪಾಪವು ಬರುವದಿಲ್ಲವೇ ?

**ಮಹಾ**:—ಪತಿವ್ರತೆಯು ಪತಿಯು ತನ್ನ ಪ್ರತ್ಯಕ್ಷವಾಗಿ ಆತ್ಮಹತ್ಯ ಮಾಡಿಕೊಳ್ಳುವದಕ್ಕೆ ಸಮ್ಮತಿಸುವದು ಪರಮಪಾಪವಲ್ಲವೇ ?

**ಈಶ್ವರ**:—ಹಾಗಾದರೆ ಹೀಗೆ ಮಾಡು, ನನ್ನನ್ನು ಬಿಡು; ನಾನು ಅಗ್ನಿಪ್ರವೇಶ ಮಾಡುತ್ತೇನೆ; ನಿನಗೆ ಪತಿವ್ರತೆಯೆಂದೆನಿಸಿಕೊಳ್ಳುವದಿದ್ದರೆ, ಆ ಮೇಲೆ ಸಹಗಮನ ಮಾಡು.

**ಮಹಾ**:—ಬೇಡಾ ಬೇಡಾ. ಮಹಾರಾಜ ! ಪ್ರಾಣತ್ಯಾಗಮಾಡಿ ಕೊಳ್ಳಬೇಡರಿ. ಎಲ್ಲಿಯವರಿಗೆ ನನ್ನ ಕೈಯಲ್ಲಿರುವದೋ ಅಲ್ಲಿಯವರೆಗೆ ನಾನು ಅದಕ್ಕೆ ಪ್ರಯತ್ನ ಮಾಡತಕ್ಕವಳೇ; ದುರ್ದೈವದಿಂದ ಕೈ ಮೀರಿ ಹೋದರೆ ಆನಂದದಿಂದ ನಾನಾದರೂ ಸತಿ ಹೋಗುವದೇ ನಿಶ್ಚಯ.

**ಈಶ್ವರ**:—ಹಾಗಾದರೆ ನೋಡುವೆನು, ಏನು ಪ್ರಯತ್ನ ಮಾಡುತ್ತೀ ಮಾಡು ಶಂಭೋ ಹರ ಹರ ಮಹದೇವ. ( ಎಂದು ಅವಳನ್ನು ದೂಡಿ ಹಾರಿಕೊಳ್ಳು ವನು. ಅವಳು ಚಟ್ಟನೇ ಮೇಲಕ್ಕೆದ್ದು ಹೋಗುವಷ್ಟರಲ್ಲಿ ಎಲ್ಲರೂ ಅವಳನ್ನು ತಡೆಯುವರು.)

**ಮಹಾ**:—ಅಯ್ಯೋ ತಡೆಯಿರಪ್ಪಾ ತಡೆಯಿರಿ; ಯಾರಾದರೂ ಅವ ರನ್ನು ಹಿಡಿಯಿರಿ; ಅಯ್ಯೋ ದೈವವೇ ಅವರು ಅಗ್ನಿಯೊಳಗೆ ಧುಮುಕಿದರು.

ನನ್ನನ್ನು ಬಿಡಿರಿ; ನಾನೂ ಅವರ ಜೊತೆಗೆ ಹೋಗುತ್ತೇನೆ; ನಾನು ನಿಮ್ಮ ಕಾಲು ಬೀಳುತ್ತೇನೆ; ನನ್ನನ್ನು ಯಾರೂ ತಡೆಯಬೇಡಿರಿ; ಅದೇ ನೋಡಿರಿ, ನನ್ನ ಪ್ರಾಣನಾಥರು ತಮ್ಮ ರೋಗಗ್ರಸ್ಥದೇಹವನ್ನು ಅಗ್ನಿಯಲ್ಲಿ ದಹಿಸಿ, ದಿವ್ಯದೇಹ ಧಾರಣಮಾಡಿ, ಕೈಲಾಸವನ್ನು ಹಿಡಿದರು; ಮತ್ತೂ ನಾನು ಹೀಗೆ ಇರತಕ್ಕವಳೇ? ಛೇ ಕಾಲತ್ರಯಕ್ಕೂ ಆಗದು; ಅದೋ ನೋಡಿರಿ ಅವರು ನನ್ನನ್ನು ಕೈಲಾಸಕ್ಕೆ ಒಯ್ಯುವದಕ್ಕೆ ನಿಂತಿರುವರು, ನನ್ನನ್ನು ಬಿಡರಿ.

**ವಿಶ್ವ**:—ಛೀ ಹುಚ್ಚಿ! ಎಲ್ಲೀ ಕೈಲಾಸವು! ಎಲ್ಲಿಯ ಪ್ರಾಣನಾಥರು! ನಡೆ ಮನೆಗೆ, ನಿನಗೆ ಸ್ವಚ್ಛವಾಗಿ ಸ್ನಾನಕ್ಕೆ ಹಾಕುತ್ತೇನೆ.

**ನಾರದ**:—ಅಮ್ಮನವರೇ ಅವರು ಬೇಕಾದಂತೆ ಮಾಡುತ್ತಾರೆ, ನಿಮ್ಮ ಚಾತುರ್ಯವನ್ನು ತೋರಿಸಬೇಡರಿ.

**ವಿಶ್ವ**:—ಒಳ್ಳೇದು ಹಾಗೇ ಮಾಡಲಿ, ಮಗಳೇ ನಿನ್ನ ಅಭಿಪ್ರಾಯ ವೇನು?

**ಮಹಾ**:—ನಿಮಗೆ ನಾನು ಕೈಜೋಡಿಸಿ ಬೇಡಿಕೊಳ್ಳುವದೇನಂದರೆ, ನನ್ನ ಪ್ರಾಣನಾಥರ ಕೂಡ ನಾನು ಸಹಗಮನಮಾಡತಕ್ಕವಳು, ಅದರ ಸಿದ್ಧತೆಯನ್ನು ಮಾಡಿರಿ.

**ವಿಶ್ವ**:—ಬ್ರಹ್ಮಾನಂದನೇ! ಹೋಗಪ್ಪಾ! ಇವಳ ಸರ್ವ ಗೆಳತಿಯರನ್ನು ಕರೆದುಕೊಂಡು ಬಾ, ಮತ್ತು ಇವಳು ಸತಿ ಹೋಗುವ ಸಾಗ್ರಿಗಳನ್ನು ಸಿದ್ಧಪಡಿಸು (ಅವನು ಹೋಗುತ್ತಾನೆ) ಮಗಳೇ ಹೋಗುವಿಯಾ, ಆದರೆ ಹೋಗುವಾಗ್ಗೆ ನಿನ್ನ ಬಂಧುಭಗಿನಿಯರಿಗೂ, ಮೈತ್ರಿಣಿಯರಿಗೂ ಚನ್ನಾಗಿ ಭೆಟ್ಟಿಯನ್ನು ಕೊಡು.

**ತುಂಬುರ**:—ನಾರದಸ್ವಾಮಿಗಳೇ ಈಗ ಸದಾನಂದೆಗೆ ಸ್ವಲ್ಪ ಚಮತ್ಕಾರ ತೋರಿಸೋಣವೇ?

**ನಾರದ**:—ತೋರಿಸಿರಿ, ನಾನೂ ಅದನ್ನೇ ಹೇಳತಕ್ಕವನಿದ್ದೆ; ಹೋಗಲಿ ಇಬ್ಬರೂ ಜೊತೆಯಾಗಿಯೇ ಹೋಗಲಿ;

**ತುಂಬುರ**:— ಸದಾನಂದಾದೇವಿ ! ಅದು ನೋಡಿರಿ, ಮಹಾನಂದಾದೇವಿಯವರು ತಮ್ಮ ಅಪ್ಪಣೆಯನ್ನು ತೆಗೆದುಕೊಳ್ಳುವದಕ್ಕೆ ಬಂದಿರುವರು. ಅವರ ಕೂಡಾ ತಾವು ಪ್ರೀತಿಯಿಂದಾ ಮಾತಾಡದೇ ಯಾರು ಮಾತಾಡಬೇಕು! ಸುಮ್ಮನಾಗಿರಿ ಅಳಬೇಡರಿ; ಕಣ್ಣುತೆರೆದು ಅವರನ್ನು ನೋಡಿರಿ ( ಅವಳ ಕಣ್ಣುಗಳ ಮೇಲೆ ಕೈಯಾಡಿಸುವಳು. )

**ಸದಾ**:—( ಆಶ್ಚರ್ಯದಿಂದ )ದೇವಋಷಿಯೇ! ತಾವು ನನಗೆ ಸಕಾಲಕ್ಕೆ ದಿವ್ಯದೃಷ್ಟಿಯನ್ನು ಕೊಟ್ಟು, ನನ್ನ ಅಜ್ಞಾನವನ್ನು ಹೋಗಲಾಡಿಸಿದ ಬಗ್ಗೆ ನಾನು ತಮ್ಮ ಅತ್ಯಂತ ಋಣಿಯಾಗಿದ್ದೇನೆ; ತಂಗೀ ನೀನೊಬ್ಬಳೇ ಸತಿಹೋಗುವಿಯಾ? ತಡೆ ನಾನೂ ನಿನ್ನ ಕೂಡ ಬರುವೆನು. ಗೆಳತಿಯರಿರಾ ನೀವೆಲ್ಲರೂ ನನಗೆ ಅಪ್ಪಣೆಯನ್ನು ಕೊಡಿರಿ.

**ವಿಶ್ವ**:—ಇನ್ನು ಇದಕ್ಕೆ ಅಳಬೇಕೋ ಅಥವಾ ನಗಬೇಕೋ?

**ನಾರದ**:—ಸ್ಥಿರವಾದ ಸುಖದ ಕಡಗೆ ದೃಷ್ಟಿಯನ್ನು ಕೊಟ್ಟರೆ ನಗಬೇಕು; ಮತ್ತೂ ಕ್ಷಣಿಕ ಸುಖದ ಕಡೆಗೆ ದೃಷ್ಟಿಯನ್ನು ಕೊಟ್ಟರೆ ಬೇಕಾದಷ್ಟು ಅಳಬೇಕು.

**ವಿಶ್ವ**:—ಸದಾನಂದೇ! ಮಹಾನಂದೆಯು ತನ್ನ ಯಜಮಾನನಿಗೋಸ್ಕರವಾಗಿ ಸತಿಹೋಗುವಳು, ನೀನು ಯಾರಿಗೋಸ್ಕರ ಹೋಗುವೆ?

**ನಾರದ**:—ಅಮ್ಮನವರೇ! ಮಹಾನಂದಾದೇವಿಯವರು ಮತ್ತೂ ನನ್ನ ಧನಿಯರೂ ಕೈಲಾಸಕ್ಕೆ ಹೋಗುತ್ತಾರೆ; ದೂರಿನ ಪ್ರವಾಸವು; ಆದ್ದರಿಂದ ದೇವಿಯವರ ಜೊತೆಗೆ ಯಾರಾದರೂ ಬೇಕೋ ಬೇಡವೋ? ಅದಕ್ಕೋಸ್ಕರ ಸದಾನಂದಾದೇವಿಯವರು ಹೋಗುತ್ತಾರೆ; ಬೇನತ್ತ ಮೇಲೆ ತಾವೇ ಬರುತ್ತಾರೆ.

**ವಿಶ್ವ**:—ಅಂದ ಮೇಲೆ ನನ್ನನ್ನು ಅಗ್ನಿಕುಂಡದಲ್ಲಿ ನೂಕಿರಿ; ನಾನೊಬ್ಬಳೇ ಈ ಮನೆಯಲ್ಲಿ ಪಿಶಾಚಿಯಂತೆ ಕುಣಿಯುತ್ತ ಮಾಡಬೇಕೇನು?

**ನಾರದ**:—ಸ್ವಲ್ಪ ತಡಿಯರಿ, ನಿಮಗೂ ಕೈಲಾಸಕ್ಕೆ ಹೋಗುವ ಪ್ರಯತ್ನ ಮಾಡುತ್ತೇನೆ.

**ವಿಶ್ವ**:--ನಿನ್ನ ತಲೇ ಮಾಡಿಕೋ ಮೂರ್ಖಾ.

**ತುಂಬುರ**:--ನಾರದಸ್ವಾಮಿಗಳೇ ಯಾಪಾಲಯ ಸಜೀವತೇ, ಇನ್ನು ಮೇಲೆ ಇಲ್ಲಿ ನಿಂತು ಉಪಯೋಗವಿಲ್ಲಾ. (ನಾರದ ತುಂಬುರ ಹೋಗುತ್ತಾರೆ) (ಎಲ್ಲ ನಾರಿಯರು ಮಹಾನಂದೆಗೆ ಉಡಿತುಂಬಿ ಪುಷ್ಪಹಾರವನ್ನು ಕೊರಳಲ್ಲಿ ಹಾಕುತ್ತಾರೆ.)

**ಮಹಾ**:--ಭಗಿನಿಯರೇ, ನಿಮಗೆ ಏನಾದರೂ ಉಪದೇಶದ ಶಬ್ದಗಳನ್ನು ಹೇಳುವದಕ್ಕೆ ನನಗೇನೂ ಅಧಿಕಾರವಿಲ್ಲಾ; ಅಥವಾ ಇಂಥ ಮಾರ್ಗವನ್ನು ಹಿಡಿದು ನಡೆದರೆ ಅದರಿಂದ ನಿಮ್ಮ ಕಲ್ಯಾಣವಾಗುವದೆಂದು ಹೇಳುವಷ್ಟು ತ್ರಾಣವೂ ಇಲ್ಲಾ; ಮತ್ತು ಅನುಭವವಿಲ್ಲಾ; ಆದರೂ ತಮ್ಮ ಪಾತೀವೃತ್ಯವನ್ನು ಅನೇಕ ಶ್ವಾನಗಳಿಗೋಸ್ಕರ ಬೀದಿಯಲ್ಲಿ ಇಟ್ಟಿರುವ ಭಕ್ಕರಿಚೂರಿನಂತೆ ತಿಳಿಯದೇ, ಅದನ್ನು ಕೃಪಣನ ಸಂಪತ್ತಿಯಂತೆ ಜೋಪಾನ ಮಾಡಿದರೇ, ನಿಮ್ಮ ದೇಹದ, ನಿಮ್ಮ ಕುಲದ, ಮತ್ತೂ ನಿಮ್ಮ ದೇಶದ ಉದ್ಧಾರವಾಗುವದು; ಇದು ನಿಮಗೆ ನನ್ನ ಪೂರ್ಣ ಆಶೀರ್ವಾದವಿರುವದು; ಇನ್ನು ನಾನು ಬರುತ್ತೇನೆ; ಇಂದಿನವರೆಗೆ ನಾನು ತಿಳಿಯದೇ ನಿಮಗೆ ಅಪರಾಧ ಮಾಡಿದ್ದರೆ ಅದನ್ನು ಕ್ಷಮಿಸಿರಿ.

ರಾಗ ಭೈರವಿ, ತಾಳ ತ್ರಿವಟ.

**ನಾ ಪೋಗೀ ಬರ್ಪೆ ನಾರಿಯರೇ, ಬೇಡೂವೆನಾಜ್ಞೆಯಾ ॥ ಪಲ್ಲ॥**
**ನಲೆ ಸಾರ್ಥಕ ಮಾಡುವೆ ಕಾಯಾ। ತೊಲಗುವೆ ಭವ ಮಾಯಾಂಬುಧಿಯಾ । ಕೈಲಾಸಕೆ ಪತಿಸಹ ಪೋಗಿ । ಪೊಂದುವೆ ಶಾಂತಿಯಾ ॥ ೧ ॥**

(ಮಹಾನಂದಾ ಸದಾನಂದಾ ಇಬ್ಬರೂ ಅಗ್ನಿಪ್ರವೇಶ ಮಾಡುತ್ತಾರೆ.)

(ಆಕಾಶದಲ್ಲಿ ದುಂದುಭಿ ಧ್ವನಿಯಾಗುವದು. ವಿಮಾನದಲ್ಲಿ ಶಂಕರ, ಪಾರ್ವತಿ, ಗಂಗಾ ಕಾಣಿಸುವರು. ದೇವಗಣಗಳು ಪುಷ್ಪವೃಷ್ಟಿ ಮಾಡುವರು.)

**ಈಶ್ವರ**:—ಮಗನೇ ನಾರದಾ! ಮಗನೇ ತುಂಬುರ! ನನ್ನ ಶಾಪದಿಂದಾ, ವಾರಾಂಗನೆಯರಾದ ಈ ಗಿರಿಜೆಯೂ ಈ ಗಂಗೆಯೂ ನಿಮ್ಮಿಬ್ಬರ

ಮಹತ್ಪ್ರಯಾಸದಿಂದ, ನನ್ನ ಸ್ವರೂಪಕ್ಕೆ ಬಂದು ಸೇರಿದರು; ಇದರ ಬ
ನನಗೆ ಬಹಳೇ ಆನಂದವೆನಿಸಿರುವದು; ಆದರಂತೇ ನಿಮಗೆ ಆನಂದವಾಗ
ವಂತೆ ನಾನು ಏನು ಮಾಡಬೇಕು ಅದನ್ನು ತಿಳಿಸಿರಿ?

**ನಾರದ**:—ತಾತಾ! ಉಭಯಮಾತೋಶ್ರೀಯವರು, ತಮ್ಮ ಚರ
ಧೂಳಿಯಿಂದಾ, ಆ ನಂದೀಗ್ರಾಮವನ್ನು ಪವಿತ್ರ ಮಾಡಿದರು; ಮತ
ಕಲಿಯುಗದಲ್ಲಿ ಯಾವ ವೇಶ್ಯಯರು ಹೀಗೆ ವರ್ತಿಸುವರೋ, ಅ
ನ್ನಾದರೂ ಇದೇ ರೀತಿಯಿಂದಾ ಉದ್ಧರಿಸಬೇಕೆಂದು, ನಿಮ್ಮ ತ್ರಿವರ್ಗರಿಗ
ಬೇಡಿಕೊಳ್ಳುತ್ತೇನೆ.

**ತ್ರಿವರ್ಗರು**:—ತಥಾಸ್ತು ತಥಾಸ್ತು ತಥಾಸ್ತು.

**ನಾರದ-ತುಂಬುರ**:—ಭಕ್ತವಾತ್ಸಲ್ಯವನ್ನು ಎಷ್ಟು ಬಣ್ಣಿಸಿದರ
ತೀರದು.

## ಮಂಗಳಂ

**ಚಿನ್ಮಯಾನಂದ ರೂಪಾ। ದೀನೋದ್ಧರಣಾ। ಜ್ಞಾನಾಮೃ
ಕೂಪಾ॥ ಮೌನಿವರಾ। ಯೋಗವರಾ। ನಾಗಧರಾ। ಮಾ
ಹರಾ ॥೧॥ ದೇಹಿ ದೇಹಿ ಶುಭ ಮಂಗಳವಾ। ಪಾವ
ಗಂಗಾ ರಮಣಾ॥ ಪಾಹಿ ಪಾಹಿ ಭವ ಘೋರಪಾಶ ಹರಣಾ
ವಿಶ್ವೇಶಾ। ಖಲನಾಶಾ ಸುರಪೋಷಾ। ಗೌರೀಶಾ ॥ ೨**

**— ೩ನೇ ಅಂಕ ಸಮಾಪ್ತ —**